




# ಹೊಂಗನಸು

ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 42

| ಸಂಪುಟ: ೦೫ ಸಂಚಿಕೆ: ೪ | ಜುಲೈ ೨೦೧೮ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 05 Issue 4 | July 2018 | Pages - 8 | A. Sub. - Rs. 20/- | Editor : Sri. B.R. Ravindranath |




## ಶ್ರೀಮತಿ ಜಯಲಕ್ಷ್ಮಮ್ಮ ಬಾಪು ರಾಮಣ್ಣ ದತ್ತಿ




ಗಮಕವಾಚನ : ಶ್ರೀಮತಿ ಶೋಭಾ ಶಶಿಧರ್

ವ್ಯಾಖ್ಯಾನ : ಶ್ರೀ ಶ್ರೀನಿವಾಸ ಫಣಿ

ಪ್ರಸಂಗ : ರಾಘವಾಂಕ ವಿರಚಿತ ಹರಿಶ್ಚಂದ್ರ ಕಾವ್ಯದ "ವಿಶ್ವೇಶ್ವರ ಸಾಕ್ಷಾತ್ಕಾರ "

ಈ ದಿನದ ಕಾರ್ಯಕ್ರಮಕ್ಕೆ ಆಗಮಿಸಿದ ಗಮಕ ಕಲಾವಿದರನ್ನು ಮತ್ತು ಗಮಕಾಸಕ್ತರನ್ನು ಸಭೆಗೆ ಆಹ್ವಾನಿಸಿ, ಗಮಕ ಕಲಾವಿದರ ಪರಿಚಯವನ್ನು ಮಾಡಿ, ದತ್ತಿದಾನಿಗಳ ಆಶಯ ಮತ್ತು ಸ್ವತಃ ಬಾಪು ರಾಮಣ್ಣ ಅವರೇ ಸಂಗೀತ ಪ್ರೇಮಿ ಎಂದು ಡಾ.ಪಿ.ವಿನಾರಾಯಣ ಅವರು ತಮ್ಮ ಪ್ರಾಸ್ತಾವಿಕ ನುಡಿಗಳನ್ನಾಡಿದರು.ಶ್ರೀ ಬಾಪು ರಾಮಣ್ಣ ಅವರ ಪುತ್ರಿ ಶ್ರೀಮತಿ ಎಚ್.ಆರ್. ಲೀಲಾವತಿ, ನಿವೃತ್ತ ಆಕಾಶವಾಣಿ ಕಲಾವಿದರೂ ಕಾರ್ಯಕ್ರಮಕ್ಕೆ ಆಗಮಿಸಿದ್ದರು.

ಶ್ರೀ ಶ್ರೀನಿವಾಸ ಫಣಿ ಅವರು, ಸಂಕ್ಷಿಪ್ತವಾಗಿ, ಷಟ್ಪದಿ ಪ್ರೌಢ ಕಾವ್ಯದಲ್ಲಿ ಮೊದಲಿಗನಾದ ರಾಘವಾಂಕನ ಕಾಲ, ಆರಾಧ್ಯ ದೈವ, ಅವನ ಸಂಪ್ರದಾಯ, ಕುಟುಂಬದ ಮಾಹಿತಿಯನ್ನು ನೀಡಿ,ನಂತರ ಹರಿಶ್ಚಂದ್ರ ಕಾವ್ಯದ ವೃತ್ತಾಂತವನ್ನು ಸಭೆಗೆ ಪರಿಚಯಮಾಡಿದರು. ರಾಘವಾಂಕನ ಚಮತ್ಕಾರ ಸಂದರ್ಭೋಚಿತ ಸಮೀಕರಣದ ಶೈಲಿ, ಉನ್ನತವಾದ ಭಾಷೆ, ಮುಂತಾದವನ್ನು ಕೆಲವು ಉದಾಹರಣೆಯೊಂದಿಗೆ ಪರಿಚಯಿಸಿದರು.ಈ ಪೀಠಿಕೆಯೊಂದಿಗೆ ಸಭಿಕರನ್ನು ದೇವಲೋಕದ ಒಡ್ಡೋಲಗದ ಪ್ರಕರಣಕ್ಕೆ ಮಾನಸಿಕವಾಗಿ ಸಿದ್ಧಪಡಿಸಿ ನಂತರ "ವಿಶ್ವೇಶ್ವರ ಸಾಕ್ಷಾತ್ಕಾರ" ಪ್ರಕರಣದ ಭಾಗವನ್ನು ಪ್ರಾರಂಭಮಾಡಿದರು.

ಶ್ರೀಮತಿ ಶೋಭಾ ಶಶಿಧರ್ ಅವರು ತಮ್ಮ ಸಿರಿಕಂಠದಿಂದ ಭಾವಪೂರ್ಣವಾಗಿ ಗಮಕಾಸಕ್ತರ ಹೃದಯವನ್ನು ಗೆದ್ದರು.' ಶ್ರೀ ಶ್ರೀನಿವಾಸ ಫಣಿಯವರು ಗಾಯನಕ್ಕೆ ಸರಿಸಾಟಿಯಾಗಿ ತಮ್ಮ ವಿದ್ವತ್ಪೂರ್ಣ ವ್ಯಾಖ್ಯಾನವನ್ನು ಮನಮುಟ್ಟುವಂತೆ ನೆರವೇರಿಸಿಕೊಟ್ಟು ಶ್ರೋತೃಗಳ ಮನಗೆದ್ದರು.

ಡಾ॥ ವಿಜಯಾ ಸುಬ್ಬರಾಜ್ ಅವರು ವಂದನಾರ್ಪಣೆ ಮಾಡಿದರು.

## ಗುರುತಿನ ಚೀಟಿಗಳು – ಮಾನ್ಯ ಸದಸ್ಯರ ಗಮನಕ್ಕೆ

ಪ್ರತಿಷ್ಠಾನದ ಹಲವಾರು ಸದಸ್ಯರುಗುರುತಿನ ಚೀಟಿಗಳನ್ನು ಪಡೆದುಕೊಂಡಿರುವುದಿಲ್ಲ. ೨೦೧೮ನೇ ಇಸವಿಯ ಸರ್ವ ಸದಸ್ಯರ ಸಭೆಯಲ್ಲಿ ಹಾಜರಾಗಲು ಹಾಗೂ ಚುನಾವಣೆಯ ಪ್ರಕ್ರಿಯೆಯಲ್ಲಿ ಭಾಗವಹಿಸಲು ಸದಸ್ಯತ್ವದ ಗುರುತಿನ ಚೀಟಿಯನ್ನು ಹಾಜರುಪಡಿಸುವುದು ಕಡ್ಡಾಯವಾಗಿರುತ್ತದೆ.

ಆದ್ದರಿಂದ ಗುರುತಿನ ಚೀಟಿ ಪಡೆದುಕೊಂಡಿಲ್ಲದ ಸದಸ್ಯರು ಕಚೇರಿ ವೇಳೆಗಳಲ್ಲಿ ಗುರುತಿನ ಚೀಟಿಗಳನ್ನು ಆದಷ್ಟೂ ಬೇಗನೆ ಪಡೆಯಬೇಕೆಂದು ಕೋರಿಕೊಳ್ಳುತ್ತೇವೆ.

## ಸಂಪಾದಕೀಯ

ಕರ್ನಾಟಕದ ಕಲೆ, ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಾವಿರಾರು ಪ್ರಶಸ್ತಿಗಳನ್ನು ಸ್ಥಾಪಿಸಲಾಗಿರುತ್ತದೆ. ಈ ಪ್ರಶಸ್ತಿಗಳನ್ನು ಕರ್ನಾಟಕ ಸರ್ಕಾರವನ್ನೂ ಒಳಗೊಂಡು ನೂರಾರು ಸಂಘ ಸಂಸ್ಥೆಗಳು ನೀಡುತ್ತಾ ಬರುತ್ತಿವೆ. ಪ್ರತಿ ವರ್ಷವೂ ಹೊಸ ಹೊಸ ಪ್ರಶಸ್ತಿಗಳನ್ನು ಸ್ಥಾಪಿಸಲಾಗುತ್ತಿದೆ.

ಆದರೆ ಈ ಬಗ್ಗೆ ನಂಬಲರ್ಹ ಅಂಕಿ ಅಂಶಗಳು ಲಭ್ಯವಿರುವುದಿಲ್ಲ. ತಕ್ಕಮಟ್ಟಿಗೆ ಅಂದಾಜಿಸಬಹುದಾದ ಊಹನದ ಪ್ರಕಾರ ಕರ್ನಾಟಕದಲ್ಲಿಯೇ ಸ್ಥಾಪಿತಗೊಂಡಿರುವ ಪ್ರಶಸ್ತಿಗಳ ಸಂಖ್ಯೆ ಮೂರು ಸಾವಿರಕ್ಕೂ ಹೆಚ್ಚಿರುತ್ತದೆ.ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸ್ಥಾಪಿತಗೊಂಡಿರುವ ಪ್ರಶಸ್ತಿಗಳ ಸಂಖ್ಯೆಯೇ ಹೆಚ್ಚು. ಈ ಪ್ರಶಸ್ತಿಗಳನ್ನು ಯಾವ ಯಾವ ಕ್ಷೇತ್ರದ ಸಾಧನೆಗಳಿಗಾಗಿ ನೀಡಲಾಗುತ್ತಿದೆ, ಯಾವ ಯಾವ ಸಂಸ್ಥೆಗಳು ನೀಡುತ್ತಿವೆ, ಯಾವ ಅವಧಿಗೆ ನೀಡಲಾಗುತ್ತಿದೆ ಇತ್ಯಾದಿ ವಿವರಗಳೂ ಅಲಭ್ಯ.

ಈ ಪ್ರಶಸ್ತಿಗಳ ಬಗ್ಗೆಯ ಪ್ರಕಟಣೆಗಳನ್ನು ಆಸಕ್ತರಿಗೆ ತಲುಪಿಸಲು ಇರುವ ಏಕೈಕ ಮಾರ್ಗ ದಿನಪತ್ರಿಕೆಗಳಾಗಿರುತ್ತವೆ. ಈಗಿನ ಪರಿಸ್ಥಿತಿಯಲ್ಲಿ ದಿನಪತ್ರಿಕೆಗಳಲ್ಲಿ ಕೇವಲ ಪ್ರಮುಖ ಹಾಗೂ ಪ್ರಸಿದ್ದ ಅದರಲ್ಲೂ ಸರ್ಕಾರದ ವತಿಯಿಂದ ನೀಡಲಾಗುವ ಪ್ರಶಸ್ತಿಗಳ ಬಗ್ಗೆ ಮಾತ್ರ ಪ್ರಕಟಣೆಗಳು ಕಾಣಿಸುತ್ತವೆ. ಪ್ರಶಸ್ತಿ ಪಡೆಯಲು ಅರ್ಹರಾದ ಸಾಧಕರಿಗೆ ಪ್ರಶಸ್ತಿಗಳಿರುವುದರ ಬಗ್ಗೆ ಹೆಚ್ಚು ಮಾಹಿತಿಗಳು ಲಭ್ಯವಾಗುತ್ತಿಲ್ಲ. ಹಾಗೆಯೇ ಪ್ರಶಸ್ತಿಗಳನ್ನು ಸ್ಥಾಪಿಸಿರುವ ಸಂಘ ಸಂಸ್ಥೆಗಳಿಗೆ ಅರ್ಹ ಸಾಧಕರನ್ನು ಹುಡುಕಲು ಯಾವುದೇ ವ್ಯವಸ್ಥಿತ ಮಾರ್ಗಗಳು ಲಭ್ಯವಿಲ್ಲ. ಪ್ರಶಸ್ತಿಗಳನ್ನು ನೀಡುವ ಸಲುವಾಗಿ ಅರ್ಹ ಸಾಧಕರನ್ನು ಹುಡುಕಲು ತಗಲಬಹುದಾದ ವೆಚ್ಚ ಹಾಗೂ ಶ್ರಮ ವಹಿಸಲು ಸಂಘ ಸಂಸ್ಥೆಗಳಿಗೆ ಹಣದ ಸಂಪನ್ಮೂಲಗಳಾಗಲಿ ಹಾಗೂ ಮಾನವ ಸಂಪನ್ಮೂಲಗಳಾಗಲೀ ಹೆಚ್ಚಿರುವುದಿಲ್ಲ.

ಈ ಕಾರಣಗಳ ಜೊತೆ ಇನ್ನೂ ಹಲವಾರು ಕಾರಣಗಳು ಸೇರಿ-ಕೊಂಡು ಅಂತಿಮವಾಗಿ ಅರ್ಹರಿಗೆ ಪ್ರಶಸ್ತಿಗಳನ್ನು ನೀಡಲಾಗುತ್ತಿಲ್ಲವಲ್ಲ ಎಂದು ಸಂಘ ಸಂಸ್ಥೆಗಳು ಚಿಂತಿಸುತ್ತಿದ್ದರೆ, ತಮ್ಮ ಉತ್ತಮ ಕೆಲಸವನ್ನು ಸರಿಯಾಗಿ ಗುರುತಿಸುತ್ತಿಲ್ಲವಲ್ಲ ಎಂಬುದು ಅರ್ಹ ಸಾಧಕರ ಕೊರಗು ಆಗಿರುತ್ತದೆ. ಇದರ ಪರಿಣಾಮವಾಗಿ ಹಲವಾರು ರೀತಿಯ ಹಲವಾರು ಕ್ಷೇತ್ರಗಳಿಗೆ ಸಂಬಂಧಿಸಿದಂತೆ, ಹಲವಾರು ವಿಷಯಗಳಿಗೆ ಸಂಬಂಧಿಸಿದಂತೆ, ಹಲವಾರು ರೀತಿಯ ಸಾಧನೆಗಳಿಗೆ ಸಂಬಂಧಿಸದಂತೆ ಲಭ್ಯವಿರುವ ಪ್ರಶಸ್ತಿಗಳಿಗೆ ಸೂಕ್ತವಾದ ಅರ್ಹ ಸಾಧಕರನ್ನು ಗುರುತಿಸುವುದು ಕಷ್ಟವಾಗುತ್ತಿದೆ. ಇಂತಹ ಪರಿಸ್ಥಿತಿಗೆ ಪ್ರತಿಯಾಗಿ ಕೇವಲ ಜಾಲತಾಣಗಳ ಮೂಲಕ ಪ್ರಯತ್ನಿಸಿದರೂ ಹಲವಾರು ದೇಶಗಳಲ್ಲಿ ಲಭ್ಯವಿರುವ ಪ್ರಶಸ್ತಿಗಳ ಬಗ್ಗೆ ಸುಲಭವಾಗಿ ಮಾಹಿತಿಗಳು ದೊರಕುತ್ತಿವೆ.

ಈ ಬಗ್ಗೆ ಮಾಹಿತಿ ಸಂಗ್ರಹ ಮಾಡಲು ಪ್ರಯತ್ನಪಡುತ್ತಿರುವ ಈ ಲೇಖಕನಿಗೆ ಹೆಚ್ಚಿನ ಸಹಕಾರವೂ ದೊರಕುತ್ತಿಲ್ಲ.

ಈ ನಿಟ್ಟಿನಲ್ಲಿ ಆಗಬೇಕಾದ ಕೆಲಸಗಳು ಬಹಳಷ್ಟಿವೆ. ಬಹಳ ವ್ಯವಸ್ಥಿತವಾಗಿ ಮಾಡಬೇಕೆಂದು ಯೋಜಿಸಿದಲ್ಲಿ, ವಿವಿಧ ಕ್ಷೇತ್ರಗಳಲ್ಲಿ, ವಿವಿಧ ವಿಷಯಗಳಲ್ಲಿ ಪ್ರಶಸ್ತಿಗಳಿಗೆ ಸೂಕ್ತರಾದ ನಾನಾ ರೀತಿಯ ಸಾಧಕರನ್ನು ಗುರುತಿಸುವ ಏಕೈಕ ಗುರಿ ಹೊಂದಿರುವ ಒಂದು ರಾಜ್ಯ ಮಟ್ಟದ ಸಂಸ್ಥೆಯನ್ನು ಸ್ಥಾಪಿಸುವುದು ಇಂದಿನ ಅಗತ್ಯವೆನಿಸುತ್ತದೆ.

ಬಿ.ಆರ್ ರವೀಂದ್ರನಾಥ್
ಸಂಪಾದಕರು

### ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು ಕಳೆದ 37 ವರ್ಷಗಳಲ್ಲಿ ಬಹಳಷ್ಟನ್ನು ಸಾಧಿಸಿರುತ್ತದೆ. ಪ್ರತಿಷ್ಠಾನದ ಚಟುವಟಿಕೆಗಳಲ್ಲಿ ಬಹಳಷ್ಟು ಹಿರಿಯರು ಭಾಗವಹಿಸಿ ಪ್ರತಿಷ್ಠಾನದ ಏಳಿಗೆಗಾಗಿ ಶ್ರಮಿಸಿರುತ್ತಾರೆ. ಪ್ರಸ್ತುತ ಪ್ರತಿಷ್ಠಾನದ ಸಾಧನೆಗಳನ್ನು ಹಾಗೂ ಹಿರಿಯರ ಅನುಭವಗಳನ್ನು ದಾಖಲಿಸುವ ಯೋಜನೆಯನ್ನು ಪ್ರತಿಷ್ಠಾನವು ಹಮ್ಮಿಕೊಂಡಿದ್ದು ಬರಲಿರುವ ಜುಲೈ-ಆಗಸ್ಟ್ ತಿಂಗಳಿನಲ್ಲಿ ಒಂದು ಪುಸ್ತಕವನ್ನು ಪ್ರಕಟಿಸಲು ಉದ್ದೇಶಿಸಿರುತ್ತದೆ.

ಬಿಎಂಶ್ರೀ ಪ್ರತಿಷ್ಠಾನದ ಬಗ್ಗೆ ಅಭಿಮಾನ ಹೊಂದಿರುವ ಎಲ್ಲಾ ಓದುಗರೂ ಹಾಗೂ ಸದಸ್ಯರೂ, ಪ್ರತಿಷ್ಠಾನದ ಜೊತೆ ತಮ್ಮ ಒಡನಾಟವನ್ನು ದಾಖಲಿಸಿರುವ ಲೇಖನವನ್ನು ದಯವಿಟ್ಟು ನೀಡಬೇಕೆಂದು ಕೋರುತ್ತೇವೆ. (ಪುಟ ಮಿತಿ ಎ4 ಗಾತ್ರದ 3 ರಿಂದ 5 ಪುಟಗಳು). ಲೇಖನವನ್ನು ಜೂನ್ 15ರ ಒಳಗೆ ತಲುಪಿಸಿದಲ್ಲಿ ಬಹಳ ಅನುಕೂಲವಾಗುತ್ತದೆ.

## ಪ್ರತಿಷ್ಠಾನದ ಬಗ್ಗೆ ಒಂದು ಕಿರು ಸಾಕ್ಷ್ಯಚಿತ್ರ ನಿರ್ಮಾಣ

ಪ್ರತಿಷ್ಠಾನದ ಬಗ್ಗೆ ಒಂದುಕಿರು ಸಾಕ್ಷ್ಯಚಿತ್ರವನ್ನು ನಿರ್ಮಾಣ ಮಾಡಲು ಸಿದ್ದತೆಗಳನ್ನು ಮಾಡಿಕೊಳ್ಳಲಾಗುತ್ತಿದೆ. ಈ ಕಿರುಚಿತ್ರದಲ್ಲಿ ಪ್ರತಿಷ್ಠಾನದಇತಿಹಾಸ,ಇದುವರೆಗೆ ನಡೆಸಿಕೊಂಡು ಬಂದಿರುವ ಚಟುವಟಿಕೆಗಳು ಹಾಗೂ ಪ್ರತಿಷ್ಠಾನದ ಏಳಿಗೆಗಾಗಿ ಶ್ರಮಿಸಿದವರ ಕೊಡುಗೆಗಳನ್ನು ಪರಿಣಾಮ ಕಾರಿಯಾಗಿಚಿತ್ರಿಸುವಉದ್ದೇಶವಿರುತ್ತದೆ. ಈ ನಿಟ್ಟಿನಲ್ಲಿ ಪ್ರತಿಷ್ಠಾನದ ಸದಸ್ಯರು ಹಾಗೂ ಅಭಿಮಾನಿಗಳು ಈ ಬಗ್ಗೆ ಸಲಹೆ ಸೂಚನೆಗಳನ್ನು ನೀಡಬೇಕು ಹಾಗೂ ಈ ಬಗ್ಗೆ ತಮ್ಮ ಬಳಿ ಇರಬಹುದಾದ ದಾಖಲೆಗಳು, ಭಾವಚಿತ್ರಗಳು ಇತ್ಯಾದಿಗಳನ್ನು ಪ್ರತಿಷ್ಠಾನಕ್ಕೆ ಒದಗಿಸಿಕೊಡಬೇಕೆಂದು ವಿನಂತಿಸುತ್ತೇವೆ.

### ಕೋರಿಕೆ

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. ೨೦/ - ಆಗಿದ್ದು ಐದು ವರ್ಷಗಳ ಚಂದಾಹಣ ರೂ, ೧೦೦/- ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

### ಜುಲೈ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಫ.ಗು. ಹಳಕಟ್ಟಿ | ೨-೭-೧೮೮೦ |
| ದೇ. ಜವರೇಗೌಡ | ೬-೭-೧೯೧೫ |
| ಟಿಪಿ ಕೈಲಾಸಂ | ೯-೭-೧೮೮೪ |
| ಆಲೂರ ವೆಂಕಟರಾಯರು | ೧೨-೭-೧೮೮೦ |
| ರಂ ಶ್ರೀ ಮುಗಳಿ | ೧೫-೭-೧೯೦೬ |
| ಬಿಎಲ್‌ರೈಸ್ | ೧೭-೭-೧೮೩೭ |
| ಶಾಂತಿನಾಥ ದೇಸಾಯಿ | ೨೨-೭-೧೯೨೯ |
| ಜಿ.ಬಿ. ಜೋಶಿ | ೨೯-೭-೧೯೦೪ |
| ಮಧುರ ಚೆನ್ನ | ೩೧-೭-೧೯೦೩ |

### ಜುಲೈ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಆನಕೃ | ೮-೭-೧೯೭೧ |
| ಬಿ.ಎಲ್. ರೈಸ್ | ೧೦-೭-೧೯೨೭ |
| ನಿರುಪಮಾ | ೧೧-೭-೨೦೧೩ |
| ಜಯದೇವಿ ತಾಯಿ ಲಿಗಾಡೆ | ೨೫-೭-೧೯೮೬ |
| ತ್ರಿವೇಣಿ | ೨೯-೭-೧೯೬೩ |
| ಪಿಕ್ರಿನ್ | ಜುಲೈ ೧೯೩೬ |

# ಜುಲೈ ೨೦೧೮ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಪ್ರತಿಷ್ಠಾನ



### ೦೬-೦೭-೨೦೧೮ ಶುಕ್ರವಾರ ಸಂಜೆ ೬-೦೦ ಗಂಟೆಗೆ

**"ಅಕ್ಕರಗೊಟ್ಟಿ"-೪೦**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ :'ಕವಿರಾಜ ಮಾರ್ಗ'ದಲ್ಲಿ ಉಕ್ತವಾದ 'ಗದ್ಯಕಥಾ' ಒಂದು ವಿವರಣೆ

ಚರ್ಚೆಗೆ ಚಾಲನೆ ನೀಡುವವರು :ಡಾ॥ ಪಿ.ವಿ.ನಾರಾಯಣ

### ೧೧-೭-೨೦೧೮ ಬುಧವಾರ ಸಂಜೆ ೬-೦೦ಗಂಟೆಗೆ

**ಡಿ.ಲಿಂಗಯ್ಯ, ರಾಸ ಸಾಹಿತ್ಯ. ಟಿ.ಎನ್.ವೆಂಕಣ್ಣಯ್ಯ, ತೀ.ನಂ.ಶ್ರೀ, ಶಾರದಮ್ಮ ಹನುಮಯ್ಯ ದತ್ತಿ ಉಪನ್ಯಾಸ**

ವಿಷಯ : ಬೇಂದ್ರೆಯವರ ಶಬ್ದಲೋಕ

ಉಪನ್ಯಾಸಕರು : ಶ್ರೀ.ಜಿ. ಕೃಷ್ಣಪ್ಪ (ವಿದ್ವಾಂಸರು)



### ೧೮-೦೭-೨೦೧೮ ಬುಧವಾರಸಂಜೆ ೬-೦೦ಗಂಟೆಗೆ

**ಸಾಹಿತ್ಯ ಸಂಚಲನ**

ಬಿ.ಎಂ.ಶ್ರೀ ಪ್ರತಿಷ್ಠಾನದ ಸಹಯೋಗದಲ್ಲಿ

ಕರ್ನಾಟಕ ಲೇಖಕಿಯರ ಸಂಘದ ಕಾರ್ಯಕ್ರಮ



### ೨೫-೦೭-೨೦೧೮ ಬುಧವಾರ ಸಂಜೆ ೬-೦೦ ಗಂಟೆಗೆ

**'ಸಾಹಿತ್ಯ ವಿಹಾರ'-೫**

ಸಾಕ್ಷ್ಯಚಿತ್ರ ಪ್ರದರ್ಶನ

## ಪ್ರೊ.ಟಿ.ಎಸ್. ವೆಂಕಣ್ಣಯ್ಯನವರು

ಪ್ರೊ.ಟಿ.ಎಸ್. ವೆಂಕಣ್ಣಯ್ಯನವರು- ಕನ್ನಡದ ಅಶ್ವಿನಿ ದೇವತೆಗಳಲ್ಲಿ ಒಬ್ಬರೆಂದೇ ಖ್ಯಾತರಾಗಿದ್ದವರು. ಇವರ ಸಂಬಂಧಿಗಳಾದ ಚಂದ್ರಶೇಖರ ಶಾಸ್ತ್ರಿಗಳು ಪ್ರಸಿದ್ಧ ಲಾವಣಿಕಾರರು, ಇವರ ಮಕ್ಕಳೇ ನಾಟಕಕಾರರಾದಕ್ಷೀರಸಾಗರ, ಕವಯಿತ್ರಿಯರಾದ ಬೆಳಗೆರೆ ಜಾನಕಮ್ಮ, ಬೆಳಗೆರೆ ಪಾರ್ವತಮ್ಮ, ಬೆಳಗೆರೆ ಕೃಷ್ಣಶಾಸ್ತ್ರಿಗಳು.ಟಿ.ಎಸ್.ವೆಂ.ರವರಇನ್ನೊಬ್ಬತಮ್ಮಂದಿರಾದತ.ಸು.ಶಾಮರಾಯರು, ಸಹೋದರನ ಮಗ ತ.ರಾ.ಸು.ಹೀಗೆ ಸಾಹಿತ್ಯಗಣಿಯ ವಂಶಸ್ಥರು. ಮೈಸೂರಿನಲ್ಲಿ ಬಿ.ಎ. ಪದವಿ.ಎಲ್.ಎಲ್.ಬಿ. ಓದಿದ್ದು ಮುಂಬಯಿಯಲ್ಲಿ. ಆದರೆ ವಿದ್ಯಾಭ್ಯಾಸಅಪೂರ್ಣ.ಉದ್ಯೋಗಕ್ಕೆ ಸೇರಿದ್ದು ಅಂಚೆ ಕಚೇರಿಯಲ್ಲಿಗುಮಾಸ್ತರಾಗಿ ಕೆಲಕಾಲ.ಮತ್ತೆ ಮೈಸೂರಿನಲ್ಲಿಕನ್ನಡ, ತೆಲುಗು ಸಾಹಿತ್ಯಾಧ್ಯಯನ ಮದರಾಸು ವಿಶ್ವವಿದ್ಯಾಲಯದಿಂದ ೧೯೧೪ರಲ್ಲಿ ಎಂ.ಎ.ಪದವಿ.ಉದ್ಯೋಗಕ್ಕಾಗಿ ಸೇರಿದ್ದುಧಾರವಾಡದ ಬಾಸೆಲ್ ಮಿಷನ್ ಹೈಸ್ಕೂಲಿನಲ್ಲಿಉಪಾಧ್ಯಾಯರಾಗಿ.ಬೆಂಗಳೂರು ಸೇಂಟ್‌ಜೋಸೆಫ್‌ಕಾಲೇಜು, ದೊಡ್ಡಬಳ್ಳಾಪುರ ಮುಂತಾದೆಡೆ ಶಿಕ್ಷಕ ವೃತ್ತಿ.೧೯೧೯ರಲ್ಲಿ ಸೆಂಟ್ರಲ್ ಕಾಲೇಜಿನಲ್ಲಿಕನ್ನಡಅಧ್ಯಾಪಕರಾಗಿ ನೇಮಕ.ಅಸಿಸ್ಟೆಂಟ್ ಪ್ರೊಫೆಸರಾಗಿ ಬಡ್ತಿ.೧೯೨೭ರಲ್ಲಿ ಮೈಸೂರು ಮಹಾರಾಜಕಾಲೇಜಿನಲ್ಲಿಕನ್ನಡದ ಪ್ರಥಮ ಪ್ರಾಧ್ಯಾಪಕರಾಗಿ ನೇಮಕ.ಬಹುಭಾಷಾ ವಿಶಾರದರು.ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಬಂಗಾಳಿ ಭಾಷೆಗಳಲ್ಲಿ ಪಡೆದ ಪ್ರಾವೀಣ್ಯತೆ.ಹಲವಾರು ಕೃತಿಗಳ ರಚನೆ. ಭಾಷಾಂತರ-ಶ್ರೀ ರಾಮಕೃಷ್ಣ ಲೀಲಾ ಪ್ರಸಂಗದ ಭಾಗ, ರವೀಂದ್ರರ ಪ್ರಬಂಧಗಳನ್ನಾಧರಿಸಿ ಬರೆದ 'ಪ್ರಾಚೀನ ಸಾಹಿತ್ಯ.'ಎ.ಆರ್. ಕೃ.ರೊಡನೆರಾಮಕೃಷ್ಣ ಪರಮಹಂಸರಚರಿತ್ರೆ.ಸಂಪಾದಿತ-ಹರಿಹರನ ಬಸವರಾಜದೇವರ ರಗಳೆ, ಸಿದ್ಧರಾಮಪುರಾಣ (ಡಿ.ಎಲ್.ಎನ್.ರೊಡನೆ) ಕರ್ನಾಟಕಕಾದಂಬರಿ, ಪಂಪಭಾರತ, ಕುಮಾರವ್ಯಾಸ ಭಾರತ, ಹರಿಶ್ಚಂದ್ರಕಾವ್ಯ ಸಂಗ್ರಹ. ವ್ಯಾಕರಣ ಹಾಗೂ ಕನ್ನಡ ಭಾಷಾಇತಿಹಾಸದಕನ್ನಡಕೈಪಿಡಿ, ಕನ್ನಡ ಸಾಹಿತ್ಯ ಮತ್ತುಇತರ ಲೇಖನಗಳು ಮುಂತಾದ ಕೃತಿಗಳು. ೧೯೧೮ರಲ್ಲಿ ಎ.ಆರ್.ಕೃ.ರೊಡನೆ ಸೇರಿ ಪ್ರಾರಂಭಿಸಿದ್ದು ಸೆಂಟ್ರಲ್‌ಕಾಲೇಜಿನಕರ್ನಾಟಕ ಸಂಘ.ಸಂಘದಿಂದ ಹಲವಾರುಕೃತಿ ಪ್ರಕಟಣೆ. ಬಿ.ಎಂ.ಶ್ರೀ.ಯವರ ಇಂಗ್ಲಿಷ್ ಗೀತೆಗಳು, ಡಿ.ವಿ.ಜಿಯವರ ವಸಂತಕುಸುಮಾಂಜಲಿ, ನಿವೇದನ ಮುಂತಾದುವು. ಪ್ರಬುದ್ಧಕರ್ನಾಟಕ ಪತ್ರಿಕೆ ಹೊರತರಲು ಪಟ್ಟ ಶ್ರಮ. ದೇವರು, ಧರ್ಮದಲ್ಲಿ ಶ್ರದ್ಧೆ, ಬದುಕನ್ನು ವ್ರತದಂತೆಕಂಡ ಬದುಕು.

## ಪ್ರೊಫೆಸರ್‌ತೀ.ನಂ. ಶ್ರೀಕಂಠಯ್ಯ (೧೯೦೬ – ೧೯೬೬)

ಪ್ರೊ. ತೀ.ನಂ.ಶ್ರೀ ಅವರು ಕನ್ನಡದ ಪ್ರಮುಖ ಸಾಹಿತಿಗಳಲ್ಲೊಬ್ಬರು, ಹಾಗೂ ಕನ್ನಡದ ಶ್ರೇಷ್ಠ ವಿದ್ವಾಂಸ ಹಾಗೂ ವಿಮರ್ಶಕರಾಗಿದ್ದರು.ಸೃಜನಶೀಲ ಲೇಖಕರಾಗಿದ್ದಅವರ ಸಂಶೋಧನಾತ್ಮಕ ಬರವಣಿಗೆಗಳಲ್ಲಿಯೂ ಕಾವ್ಯ ಸ್ಪರ್ಶವನ್ನು ಕಾಣಬಹುದಾಗಿತ್ತು. ಅವರು ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು ಆಗಿದ್ದುದಲ್ಲದೆ ಕಲಾನಿಕಾಯದ ಡೀನ್ ಆಗಿದ್ದರು. ಕರ್ನಾಟಕ ವಿಶ್ವ ವಿದ್ಯಾಲಯದ ಸ್ನಾತಕೋತ್ತರ ಕನ್ನಡ ವಿಭಾಗದ ಮೊಟ್ಟ ಮೊದಲ ಪ್ರಾಧ್ಯಾಪಕರೂ ಆಗಿದ್ದರು. ಅವರು ಆದರ್ಶ ಪ್ರಾಧ್ಯಾಪಕರು ಮತ್ತು ಶ್ರೇಷ್ಠ ವಾಗ್ಮಿಯೆಂದು ಪ್ರಸಿದ್ಧರಾಗಿದ್ದರು. ತೀ.ನಂ.ಶ್ರೀ ಅವರು ಕಾವ್ಯ ಮೀಮಾಂಸೆ, ಸಾಹಿತ್ಯ ವಿಮರ್ಶೆ, ಛಂದಸ್ಸು, ಕಾವ್ಯ, ಪ್ರಬಂಧ ಸಾಹಿತ್ಯ, ಅನುವಾದ ಸಾಹಿತ್ಯ, ಗ್ರಂಥ ಸಂಪಾದನೆ ಮತ್ತು ಭಾಷಾವಿಜ್ಞಾನ – ಈ ವಿಷಯಗಳಲ್ಲಿ ವಿಶೇಷವಾದ ತಜ್ಞತೆಯನ್ನು ಪಡೆದಿದ್ದು, ಈ ಕ್ಷೇತ್ರಗಳನ್ನು ಶ್ರೀಮಂತಗೊಳಿಸಿದ್ದಾರೆ.

"ಒಲುಮೆ" ಕನ್ನಡದ ಮೊಟ್ಟಮೊದಲನೆಯ ಪ್ರೇಮಗೀತೆಗಳ ಸಂಕಲನವಾಗಿದ್ದು, ಕೆ.ಎಸ್.ನರಸಿಂಹಸ್ವಾಮಿ ಅವರ "ಮೈಸೂರು ಮಲ್ಲಿಗೆ" ಸಂಕಲನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. "ನಂಟರು" ಕನ್ನಡದ ಮಹತ್ವದ ಲಲಿತ ಪ್ರಬಂಧಗಳ ಸಂಕಲನಗಳಲ್ಲೊಂದು. ರಾಕ್ಷಸನ ಮುದ್ರಿಕೆ ವಿಶಾಖ ದತ್ತನ ಮುದ್ರಾರಾಕ್ಷಸ, ನಾಟಕದ ಯಶಸ್ವಿ ಭಾಷಾಂತರ ಮಾತ್ರವಾಗಿರುವುದಲ್ಲದೆ, ಸೃಜನಶೀಲ ರೂಪಾಂತರವೂ ಆಗಿದೆ.

# ಬಿ.ಎಂ.ಶ್ರೀ ಪ್ರತಿಷ್ಠಾನದ ಕಾರ್ಯಕ್ರಮಗಳು

## ಅಕ್ಕರಗೊಟ್ಟಿ' : ೦೭-೦೬-೨೦೧೮

ವಿಷಯ: 'ಹಟ್ಟಿ ಕಾಳಗ'

ಚಾಲನೆ ನೀಡಿದವರು : ಡಾ. ಸಿ.ಯು. ಮಂಜುನಾಥ್




ಡಾ. ಪಿ.ವಿ.ನಾರಾಯಣ ಅವರು ಅಕ್ಕರಗೊಟ್ಟಿ ಕಾರ್ಯಕ್ರಮಕ್ಕೆ ಚಾಲನೆ ನೀಡಿದ ಡಾ. ಸಿ.ಯು.ಮಂಜುನಾಥ್ ಅವರಿಗೂ ಮತ್ತು ಚರ್ಚೆಯಲ್ಲಿ ಭಾಗವಹಿಸಲು ಬಂದಿರುವ ಶಾಸನ ಶಾಸ್ತ್ರ ಆಸಕ್ತರಿಗೂ ಮತ್ತು ಇತಿಹಾಸ ಅಸಕ್ತರಿಗೂ ಸ್ವಾಗತ ಕೋರಿ, ಸಭೆಗೆ ಡಾ. ಸಿ.ಯು.ಮಂಜುನಾಥರನ್ನು ಪರಿಚಯಿಸಿದರು.

ವಿಷಯದ ಬಗ್ಗೆ ಚರ್ಚೆಗೆ ಹಿನ್ನೆಲೆಯಾಗಿ ಸಂಕ್ಷಿಪ್ತವಾಗಿ, ವೀರಗಲ್ಲುಗಳು, ಅವುಗಳಲಿನ ಪ್ರಬೇದಗಳು, ವೀರರ ಸಾವಿಗೆ ಕಾರಣವಾಗಿ ಅವರ ವೀರ ಕೃತ್ಯಗಳು, ಅವರ ನೆನಪಿಗಾಗಿ ನಿಲ್ಲಿಸಿದ ಶಾಸನ ಸಹಿತ ಮತ್ತು ಶಾಸನ ರಹಿತ ವೀರಗಲ್ಲುಗಳು ಬಗ್ಗೆ ಮಾಹಿತಿ ನೀಡಿ, ಚರ್ಚೆಗೆ ಗ್ರಾಸವಾಗಿರುವ 'ಹಟ್ಟಿಕಾಳಗ' ಬಗ್ಗೆ ಸ್ಪಷ್ಟ ಚಿತ್ರಣ ದೊರಕದೆ ಇರುವುದರಿಂದ, ಅದನ್ನು ಇಂದು ಇಲ್ಲಿ ಚರ್ಚಿಸುವ ಸಲುವಾಗಿ ತಾವು ಬಂದಿರುವುದಾಗಿ ತಿಳಿಸಿ, ಚರ್ಚೆಗೆ ಚಾಲನೆ ನೀಡಿದರು.

ಅಕ್ಷರಷ : ಸಭೆಯು ಶಾಸನ ಶಾಸ್ತ್ರ ತರಗತಿಯ ಸ್ವರೂಪವನ್ನು ಪಡೆದುಕೊಂಡು, ತುರುಗೋಳ್ ಹಂದಿಬೇಟೆ, ಹುಲಿಬೇಟೆ, ಕೋಟೆ ಕಾಳಗ, ಪೆಣ್ಬುಯಲ್ ಇವುಗಳ ಬಗ್ಗೆ ದೀರ್ಘಚರ್ಚೆಗೆ ಎಡೆಮಾಡಿಕೊಟ್ಟಿತು. ಹಟ್ಟಿ ಕಾಳಗದ ಉಲ್ಲೇಖವಿರುವ ಕೆಲವು ಜಿಲ್ಲೆಗಳಲ್ಲಿನ ಶಾಸನಗಳನ್ನೂ ಮತ್ತು ಕೆಲವು ಸಾಹಿತ್ಯಕ ಕೃತಿಗಳನ್ನೂ ಉದಾಹರಣೆ ನೀಡಿ ಆ ಪದ ಗುಚ್ಛದ ಬಗ್ಗೆ ನಿರ್ದಿಷ್ಟವದ ವಿವರಗಳು ಇಲ್ಲಿದುದನ್ನು ತಿಳಿಸಿದರು. ಹಳ್ಳಿಗಳ ಮಧ್ಯೆ, ಊರುಗಳ ಮಧ್ಯೆ ರಾಜಕೀಯ ಕಾರಣಕ್ಕಾಗಿ ಮತ್ತು ಗೋಸಂಪತ್ತನ್ನು ದೋಚುವ ಕಾರಣಗಳಿಗಾಗಿ ಶತ್ರು ರಾಜ್ಯಗಳ ಮೇಲೆ ಆಕ್ರಮಣ ಮಾಡಿದಾಗ, ನಡೆಯುತ್ತಿದ್ದ ಕಾಳಗವೇ, ಈ 'ಹಟ್ಟಿ ಕಾಳಗ'ದ ಉಲ್ಲೇಖಕ್ಕೆ ಕಾರಣವಾಗಿರುವ ಬಗ್ಗೆ ಬುಮತದಿಂದ ಅಭಿಪ್ರಾಯ ವ್ಯಕ್ತವಾಯಿತು. ಆದರೆ ಊರಳಿವಿಗಾಗಿ ಕೈಗೊಂಡ ಕಾಳಗವೇ "ಹಟ್ಟಿ ಕಾಳಗ"ವೆಂಬುದು ಹೆಚ್ಚು ಸಮಂಜಸವೆನಿಸುತ್ತದೆ. ಎಂಬ ಅಭಿಪ್ರಾಯ ವ್ಯಕ್ತವಾಯಿತು.

ಡಾ|| ವಿಜಯಾಸುಬ್ಬರಾಜ್‌ಅವರು ವಂದನಾರ್ಪಣೆ ಮಾಡಿದರು.

## ೦೯-೦೫-೨೦೧೮ "ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : 'ಅಜ್ಞಾತ ಕವಯಿತ್ರಿ ಶ್ರೀಮತಿ' – ಒಂದು ಚರ್ಚೆ

ಚಾಲನೆ ನೀಡುವವರು : ಡಾ|| ಸಂಧ್ಯಾ .ವಿ

ಪ್ರಾರಂಭದಲ್ಲಿ ಡಾ|| ಪಿ.ವಿ.ನಾರಾಯಣ ಅವರು ಚರ್ಚೆಗೆ ಅತಿಥಿಗಳನ್ನು ಮತ್ತು ಚರ್ಚೆಯಲ್ಲಿ ಭಾಗವಹಿಸಲು ಬಂದಿರುವ ವಿದ್ವಾಂಸರನ್ನೂ ಸ್ವಾಗತಿಸಿದರು.

ಡಾ. ಸಂಧ್ಯಾ ಅವರು ಚರ್ಚೆಯ ಪ್ರಾರಂಭದಲ್ಲಿ ತಮ್ಮ ವಿಷಯವನ್ನು ಹೀಗೆ ಮಂಡಿಸಿದರು:

ಕನ್ನಡ ಸಾಹಿತ್ಯದ ಆರಂಭ ಕಾಲವನ್ನು ಮತ್ತು ಜೈನ ಕವಿಗಳ ಕೊಡುಗೆಗಳಿಂದಲೂ ಗುರುತಿಸಬಹುದು.ಕನ್ನಡ ಭಾಷೆಯ ಬೆಳೆವಣಿಗೆಗೆ ಪುರಾತನವಾದ ಮತ್ತು ಉತ್ತಮವಾದ ಗ್ರಂಥಗಳು ಜೈನ ಕವಿಗಳಿಂದಲೂ ರಚಿತವಾದ ಹಾಗೆಯೇ ವೀರಶೈವಕವಿಗಳು, ಬ್ರಾಹ್ಮಣ ಕವಿಗಳು ಮತ್ತು ಇತರರು ಕನ್ನಡ ಭಾಷೆಯ ಅಭಿವೃದ್ಧಿಗೆ ಬಹಳ ಶ್ರಮಿಸಿದ್ದಾರೆ. ಈ ಕವಿಗಳಲ್ಲಿ ಹಲವರು ಸ್ತ್ರೀಯರೂ ಸೇರಿದ್ದಾರೆ. ಷಟ್ಪದಿ, ಸಾಂಗತ್ಯ ಮತ್ತಿತರ ಪ್ರಕಾರಗಳಲ್ಲೂ ಗ್ರಂಥಗಳ ರಚನೆಯಾಗಿವೆ. ಮೈಸೂರು ರಾಜವಶಂಸ್ಥರೂ ಮತ್ತು ಅವರ ಸಮಕಾಲೀನ ಗ್ರಂಥಕರ್ತರಾದ ಹೊನ್ನಮ್ಮ, ಹೆಳವನಕಟ್ಟೆ ಗಿರಿಯಮ್ಮ ಮುಂತಾದವರನ್ನು ಗುರುತಿಸಬಹುದು.ಎಲ್ಲಾ ಗ್ರಂಥಕರ್ತರು ತಮ್ಮ ತಮ್ಮ ಹೆಸರುಗಳನ್ನು ಇಲ್ಲದೇ ಕಾವ್ಯನಾಮಗಳನ್ನು ತಪ್ಪದೇ ಹೇಳಿಕೊಂಡಿದ್ದು, ಗ್ರಂಥಗಳನ್ನು ರಚಿಸಿದವರಾರೆಂದು ತಿಳಿಯಲು ಕಷ್ಟವೆನಿಸುವುದಿಲ್ಲ.



ಶ್ರೀಮತಿ ಎಂಬ ಕವಯಿತ್ರಿಯನ್ನು ೧೬ನೇಯ ಶತಮಾನದ ಕವಿ ನೇಮರಸ ತನ್ನ ಕಾವ್ಯ ಲೋಭದತ್ತ ಚರಿತ್ರೆಯಲ್ಲಿ ಉಲ್ಲೇಖಿಸಿದ್ದಾನೆ. ಇವನಿಗೂ ಪೂರ್ವದಲ್ಲಿ ರಾಘವಾಂಕ ತನ್ನ ಸೋಮನಾಥ ಚರಿತೆಯಲ್ಲಿ ಶ್ರೀಮತಿಯ ಕುರಿತು ಪ್ರಸ್ತಾಪಿಸಿದ್ದಾನೆ ಆದರೆ, ಆಧುನಿಕ ಕಾಲಘಟ್ಟದಲ್ಲಿ ಶ್ರೀಮತಿಯ ಕುರಿತಾಗಿ ಒಂದೆರಡು ಲೇಖನಗಳಲ್ಲಿ ಮಾತ್ರ ಚರ್ಚೆ ನಡೆದು, ೧೨ನೆಯ ಶತಮಾನದ ಜಕ್ಕಲಾಂಬೆಯೇ ಶ್ರೀಮತಿ ಇರಬೇಕೆಂದು ತರ್ಕಿಸಲಾಗಿದೆ.

ಆದರೆ, ಜಕ್ಕಲಾಂಬೆಯೇ ಶ್ರೀಮತಿ ಎನಲು ಸಾಕಷ್ಟು ಆಧಾರದ ಕೊರತೆಯಿದೆ.ಅಲ್ಲದೆ ರಾಘವಾಂಕ ತಿಳಿಸುವಂತಹ ಧಾರ್ಮಿಕ, ನೇಮರಸರು ಉಲ್ಲೇಖಿಸಿರುವ ಶ್ರೀಮತಿ ಆಗಿರುವ ಸಾಧ್ಯತೆಗಳಿಲ್ಲ ಎಂಬುದರ ಕುರಿತು ಚರ್ಚೆ ನಡೆಯಿತು.ಜೊತೆಗೆ ಇನ್ನೂ ಕೆಲವು ಶ್ರೀಮತಿ ಎಂಬ ಹೆಸರಿನ ಜೈನ ಸನ್ಯಾಸಿಯರ ಉಲ್ಲೇಖ ಗಮನಿಸಲಾಯಿತು.

ಶ್ರೀಮತಿ ಎಂಬ ಹೆಸರಿನ ಕಂತಿ ಹಾಗು ಶ್ರೀಮತಿ ಅವ್ವೆ ಎಂಬುವವರ ಉಲ್ಲೇಖ ೧೨ನೆಯ ಶತಮಾನದ ಶಾಸನಗಳಲ್ಲಿ ಉಕ್ತವಾಗಿದೆ.ಅಲ್ಲದೆ, ಶ್ರುತಕೀರ್ತಿ ರಚಿಸಿರುವ ವಿಜಯಕುಮಾರಿ ಚರಿತೆ ಎಂಬ ಕೃತಿಯಲ್ಲಿಯೂ ಶ್ರೀಮತಿಯ ಪ್ರಸ್ತಾಪ ಬರುತ್ತದೆ.ಆದರೆ ಅವರು ಕವಯತ್ರಿಯರು ಎಂಬುದಕ್ಕೆ ಸ್ಪಷ್ಟ ಉಲ್ಲೇಖವಿಲ್ಲ.

'ಶ್ರೀಮತಿ' ಎನ್ನುವುದು ಅಂಕಿತನಾಮವೆ ಅಥವಾ ಜೈನ ಪರಿಭಾಷೆಯಲ್ಲಿ ಕಂತಿ,ಆರ್ಯಿಕೆ, ಗುಡ್ಡಿ ಎಂಬ ರೀತಿಯಲ್ಲಿ ಶ್ರೀಮತಿ ಪದ ಬಳಕೆಗೊಂಡಿರಬಹುದೇ? ಎಂಬ ಮೊದಲಾದ ಚರ್ಚೆಗಳೊಂದಿಗೆ ಕವಯತ್ರಿ ಶ್ರೀಮತಿಯನ್ನು ಶ್ರುತ ಕೀರ್ತಿಯ ಕೃತಿಯಲ್ಲಿ ಉಕ್ತಳಾದ ಶ್ರೀಮತಿಯೇ

ಆಗಿರುವ ಸಾಧ್ಯತೆಗಳನ್ನು ಕುರಿತು ಅಕ್ಕರಗೊಟ್ಟಿಯಲ್ಲಿ ಚರ್ಚಿಸಲಾಯಿತು.

ಚರ್ಚೆಯಲ್ಲಿ ಪ್ರೊ॥ ದೇವರಾಜಸ್ವಾಮಿ, ಶ್ರೀ ಸುಬ್ರಹ್ಮಣ್ಯ, ಡಾ.ನಳಿನಿ ವೆಂಕಟೇಶ್, ಶ್ರೀ ವೆಂಕಟರಮಣಯ್ಯ, ಮುಂತಾದ ವಿದ್ವಾಂಸರು ಭಾಗವಹಿಸಿದರು.

ಶ್ರೀ ಗುರುಪ್ರಸಾದ್ ವಂದನಾರ್ಪಣೆಯೊಂದಿಗೆ ಚರ್ಚೆ ಮುಕ್ತಾಯಗೊಂಡಿತು.

### ಸಾಹಿತ್ಯವಿಹಾರ–೩

೨೮–೫–೨೦೧೮ ರಂದು ಸಾಹಿತ್ಯವಿಹಾರ–೩ ಕಾರ್ಯಕ್ರಮದಲ್ಲಿ ಸುನಂದ ಬೆಳಗಾಂವಕರ್ ಮತ್ತು ಡಾ॥ ವಿಜಯಾದಬ್ಬೆ ಅವರ ಚಿತ್ರಮಾಲೆಯನ್ನು ತೋರಿಸಲಾಯಿತು.

### ಕಿರು ಪರಿಚಯ

### ಡಾ॥ ಸಿ.ಯು. ಮಂಜುನಾಥ

ಹಳಗನ್ನಡ ಮತ್ತು ಭಾಷಾ ಶಾಸ್ತ್ರದ ಬೋಧನೆಯಿಂದ ಶ್ರೀ ಮಂಜುನಾಥ್ ಅವರು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆಲ್ಲಾ ಹತ್ತಿರವಾದವರು.ಕನ್ನಡ ಸಾಹಿತ್ಯದ ವಿವಿಧ ಸಾಂಸ್ಕೃತಿಕ ಅಧ್ಯಯನಗಳಲ್ಲಿ ತೊಡಗಿಸಿಕೊಂಡು, ಒಳ್ಳೆ ಗುರುವಾಗಿ ತಮ್ಮ ವಿದ್ಯಾರ್ಥಿವೃಂದದಲ್ಲಿ ಛಾಪನ್ನೊತ್ತಿದ್ದಾರೆ.ಇವರ ಮಹಾ ಪ್ರಬಂಧವು "ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ" (ಕ್ರಿ.ಶ. ೧೧೫೦ರಿಂದ ಕ್ರಿ.ಶ ೧೩೪೦) ವಿಷಯಕ್ಕೆ ಸಂಬಂಧ ಪಟ್ಟಿದ್ದು, ಪಿಎಚ್.ಡಿ. ಪದವಿಯನ್ನು ೧೯೯೧ರಲ್ಲಿ ಬೆಂಗಳೂರು ವಿ.ವಿ.ಯಿಂದ ಗಳಿಸಿದರು. ೨೦೦೭ರಲ್ಲಿ ಎಸ್.ಜೆ.ಆರ್.ಸಿ. ಕಾಲೇಜಿನಿಂದ ಪ್ರಾಂಶುಪಾಲರಾಗಿ ನಿವೃತ್ತಿಹೊಂದಿದ್ದರೂ, ಈಗಲೂ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸದಾ ಹಸನ್ಮುಖಿಯಾಗಿ ಭಾಗವಹಿಸುತ್ತಿರುತ್ತಾರೆ. ಪ್ರತಿಷ್ಠಾನದಲ್ಲಿ ಹಳಗನ್ನಡ ಡಿಪ್ಲೊಮಾ ವಿದ್ಯಾರ್ಥಿಗಳಿಗೆ ಇವರು ಹಳಗನ್ನಡ ವ್ಯಾಕರಣ ಮತ್ತು ಪಾಠ ಮಾಡಿದ್ದಾರೆ ತೌಲನಿಕ ದ್ರಾವಿಡ ಭಾಷಾವಿಜ್ಞಾನ ಕುರಿತು ಶ್ರೀಯುತರು ನಾಡಿನ ಶ್ರೇಷ್ಠ ಸಂಶೋಧಕರಾದ ಡಾ॥ ಚಿದಾನಂದ ಮೂರ್ತಿ ಯವರ "ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಕೃತಿಯ ಮುಂದುವರಿದ ಭಾಗ ಹೊರತರಲು ದೀರ್ಘವಾದ ಅಧ್ಯಯನದಲ್ಲಿ ತೊಡಗಿಸಿ ಕೊಂಡಿದ್ದರೆ

### ಕಿರುಪರಿಚಯ

### ಡಾ. ಸಂಧ್ಯಾ. ವಿ.

ಸಂಧ್ಯಾ. ವಿ. ಅವರು ದಯಾನಂದ ಸಾಗರ್ ಪಾಲಿಟೆಕ್ನಿಕ್ ಕಾಲೇಜಿನಲ್ಲಿ

ಕನ್ನಡ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.ಬಿ.ಎಂ.ಶ್ರೀ ಪ್ರತಿಷ್ಠಾನದ ಮೂಲಕ ಹಂಪಿ ವಿಶ್ವವಿದ್ಯಾಲಯದಲ್ಲಿ ತಮ್ಮ ಎಂಫಿಲ್ ಪದವಿಯನ್ನು ಪಡೆದು, ೨೦೧೭ರಲ್ಲಿ ಮಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ.ಪದವಿಯನ್ನು ಪಡೆದಿದ್ದಾರೆ. ಕರ್ನಾಟಕ ಇತಿಹಾಸ ಅಕಾದೆಮಿಯ ಸಂಶೋಧನಾ ಚಟುವಟಿಕೆಗಳಲ್ಲೂ ಸಕ್ರಿಯವಾಗಿ ತೊಡಗಿಸಿಕೊಂಡು, ಹಾಲಿ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

## ಪುಸ್ತಕ ಕಿರುವಿಮರ್ಶೆ

ಅವಲೋಕನ

ಪುಸ್ತಕದ ಹೆಸರು : ಕನಕದಾಸರ ಸಾಹಿತ್ಯದಲ್ಲಿ ವಿಜಯನಗರ ಸಾಮ್ರಾಜ್ಯ

ಲೇಖಕಿ : ಡಾ॥ ರಾಜಶ್ರೀ ಕಿಶೋರ

ಮುದ್ರಣ : 2018

ಬೆಲೆ : 120

ಪ್ರಕಾಶಕರು : ಸಿರಿಗನ್ನಡಮ್ ಗೆಲ್ಗೆ ಸಂಸ್ಥೆ.

ಡಾ॥ ರಾಜಶ್ರೀ ಕಿಶೋರ ಅವರು ಕನಕದಾಸರ ಜೀವನ ಚರಿತ್ರೆಯನ್ನು ಸ್ಥೂಲವಾದ ಅಧ್ಯಯನ ಮೂಲಕ ಪರಿಚಯಿಸಿದ್ದಾರೆ. ಕನಕದಾಸರು ಸಂಚರಿಸುವ ಬಹುತೇಕ ಸ್ಥಳಗಳ ಪರಿಚಯ ಮಾಡಿರುವುದು ಗಮನ ಸೆಳೆಯುತ್ತದೆ.ಡಾ.ರಾಜಶ್ರೀ ಕಿಶೋರರವರು ಕನಕದಾಸರಿಗಿದ್ದ ಪುರಾಣೇತಿಹಾಸಗಳ ಪರಿಚಯವನ್ನು ದಾಖಲಿಸಿದ್ದಾರೆ. ಕನಕದಾಸರ ಕೀರ್ತನೆಗಳಲ್ಲಿ ಪ್ರಧಾನವಾಗಿ ಕಾಣುವ ವಿಡಂಬನೆಯನ್ನು ಲೇಖಕಿ ಸ್ಪಷ್ಟವಾಗಿ ಗುರುತಿಸಿದ್ದಾರೆ.

ಕನಕದಾಸರ ಮುಂಡಿಗೆಗಳ ವೈಶಿಷ್ಟ್ಯದ ಬಗ್ಗೆ ಹೇಳುತ್ತಾ, ಅವು ಹನ್ನೆರಡನೆಯ ಶತಮಾನದ ಬೆಡಗಿನ ವಚನಗಳನ್ನು ನೆನಪು ಮಾಡುವುದನ್ನು ಗುರುತಿಸಿದ್ದಾರೆ.ಅನುಭಾವದ ಸಂಕೇತವಾದ ಅಲ್ಲಮ ಮತ್ತು ಕನಕದಾಸರ ಸಾಮ್ಯತೆಯನ್ನು ಈ ಭಾಗ ನೆನಪು ಮಾಡುತ್ತದೆ.ಕನಕದಾಸರು ಮಂಡಿಗೆಗಳಲ್ಲಿ ನಿಂದಾಸ್ತುತಿ ಮತ್ತು ಉಗಾಭೋಗಗಳಲ್ಲಿ ಒಗಟುಗಳ ಅಂಶ ಪ್ರಮುಖವಾಗಿರುತ್ತವೆ ಎಂದು ಡಾ.ರಾಜಶ್ರೀ ಗುರುತಿಸಿದ್ದಾರೆ.

ಕನಕದಾಸರು ಕಾವ್ಯರಚನೆಯಲ್ಲಿ ಭಾಮಿನೀಷಟ್ಪದಿ ಮತ್ತು ಸಾಂಗತ್ಯ ಛಂದಸ್ಸುಗಳನ್ನು ಬಳಸಿಕೊಂಡಿರುವುದನ್ನು ಗಮನಿಸಿರುವ ಡಾ.ರಾಜಶ್ರೀ ಕಿಶೋರ್ ಮೋಹನ ತರಂಗಿಣಿಯಲ್ಲಿ ಕೃಷ್ಣದೇವರಾಯನ ಆಡಳಿತ ವಿಚಾರಗಳು, ರಾಜಧಾನಿ ಮತ್ತು ಒಡ್ಡೋಲಗದ ವೈಭವ. ಊಟ, ಉಡುಗೆ, ಆಭರಣ ಇತ್ಯಾದಿಗಳ ವೈಶಿಷ್ಟ್ಯಗಳನ್ನು ವರ್ಣಿಸಿರುವುದು ವಿಶೇಷ ಅಧ್ಯಯನ ಮಾಡುವವರಿಗೆ ಆಕರಸಾಮಗ್ರಿಯಾಗಿ ಉಪಯೋಗವಾಗುತ್ತದೆ. ವಿಜಯನಗರದಲ್ಲಿ ನಡೆಯುತ್ತಿದ್ದ ಶಾಸ್ತ್ರಾರ್ಥ ಗೋಷ್ಠಿಗಳು ಮತ್ತು ಓಕಳಿಯಾಟ ಇತ್ಯಾದಿಗಳು ಅಂದಿನ ಬದುಕಿನ ಅವಿಭಾಜ್ಯ ಅಂಗಗಳಾಗಿರುತ್ತಿದ್ದ ವಿಚಾರವು ಕುತೂಹಲಕ್ಕೆ ಕಾರಣವಾಗುತ್ತದೆ. ಕನಕದಾಸರ ಸಾಹಿತ್ಯದಲ್ಲಿ ಜಾನಪದೀಯ ಅಂಶಗಳನ್ನು ಗುರುತಿಸಿರುವ ಡಾ.ರಾಜಶ್ರೀ ಕಿಶೋರ್ ರಾಮಧ್ಯಾನ ಚರಿತ್ರೆಯಲ್ಲಿನರಾಗಿ ಮತ್ತು ಭತ್ತಗಳ ವಾಗ್ವಾದದ ನಡುವೆ ಗೋಚರಿಸುವ ಭೇದ ಭಾವದ ಕಲ್ಪನೆಯನ್ನು ಮನಗಂಡಿದ್ದಾರೆ.

ಕನಕದಾಸರ ಎಲ್ಲ ಕೃತಿಗಳನ್ನು ಅಭ್ಯಾಸ ಮಾಡಿರುವ ಡಾ.ರಾಜಶ್ರೀ ಕಿಶೋರ ಅವರು, ಅದರಲ್ಲಿ ವಿಜಯನಗರಕ್ಕೆ ಸಂಬಂಧಿಸಿದಂತಹ ಭಾಗಗಳನ್ನು ಪೃಥಕ್ಕರಿಸಿ ನೋಡುವ ಸಾರ್ಥಕ ಪ್ರಯತ್ನಮಾಡಿದ್ದಾರೆ. ನಡುವೆ ಕಾವ್ಯಗಳಲ್ಲಿನ ಕೆಲವು ವಿಶೇಷಗಳನ್ನು ಗುರುತಿಸುವ ಪ್ರಯತ್ನಗಳನ್ನೂ ಮಾಡಿದ್ದಾರೆ.ಅದರ ಫಲವಾಗಿ ಆ ಕಾಲಘಟ್ಟದಲ್ಲಿ ಪ್ರಚಲಿತವಿದ್ದ ವಿವಾಹ ಸಂದರ್ಭದ ಆಚರಣೆಗಳು ಮತ್ತು ಗಾದೆಗಳನ್ನೂ ಓದುಗರ ಗಮನಕ್ಕೆ ತಂದಿದ್ದಾರೆ.ಕೊನೆಗೆ ಕನಕದಾಸರ ಕೆಲವು ಕಾವ್ಯಗಳಲ್ಲಿನ ಪ್ರಮುಖ ಭಾಗಗಳನ್ನು ಹೆಕ್ಕಿ ತೆಗೆದು ವಿಶ್ಲೇಷಿಸಿದ್ದಾರೆ.ಇಂತಹ ಸಾರ್ಥಕ ಕೆಲಸ ಮಾಡಿರುವ ಡಾ.ರಾಜಶ್ರೀ ಕಿಶೋರ್ ಅವರು ಉತ್ಸಾಹಿ ಮತ್ತು ಸದಾ ಕಾಲ ಒಂದಲ್ಲ ಒಂದು ಕಾರ್ಯದಲ್ಲಿ ನಿರತರಾಗಿರುವವರು. ಅಂತಹವರ ಶ್ರಮ ಸಾರ್ಥಕವಾಗಲಿ ಎಂದು ಹಾರೈಸುತ್ತೇನೆ.

ಡಾ.ಎಚ್.ಎಸ್. ಗೋಪಾಲರಾವ್
ಉಪಾಧ್ಯಕ್ಷರು
ಕರ್ನಾಟಕ ಇತಿಹಾಸ ಅಕಾಡೆಮಿ, ಬೆಂಗಳೂರು



# ಪದಚರಿತೆ

ಒಂದಷ್ಟು ಪದಗಳ
ಮೂಲಚೂಲಗಳ ಹುಡುಕಾಟ
– ಡಾ. ಪಿ.ವಿ. ನಾರಾಯಣ

**ನೇಗಿಲಯೋಗಿ:** ತನ್ನಲ್ಲಿರುವ ಭಾವನೆಯನ್ನು ಸಮರ್ಪಕವಾಗಿ ತೋಡಿಕೊಳ್ಳಲು ಕವಿಗಳು ಅನೇಕ ಸಂದರ್ಭಗಳಲ್ಲಿ ಹೊಸ ಶಬ್ದಗಳನ್ನೇ ಸೃಷ್ಟಿಸಿಕೊಳ್ಳುತ್ತಾರೆ. ಅದು ಇಲ್ಲದಿರುವ ಶಬ್ದವಾಗಿರಬಹುದು, ಅಥವಾ ಹಳೆಯ ಶಬ್ದವನ್ನೇ ಹೊಸ ಅರ್ಥದಿಂದ ಬಳಸಿದುದಾಗಿರಬಹುದು, ಅಥವಾ ಇರುವ ಶಬ್ದಗಳ ಮರುಜೋಡಣೆಯಿಂದ ಮತ್ತೊಂದನ್ನು ರೂಪಿಸಿಕೊಂಡಿರುವುದಾಗಿರಬಹುದು. ಇಂಥ ಕವಿಗಳನ್ನು ಅಥವಾ ಹೊಸ ಶಬ್ದವನ್ನು ರೂಪಿಸುವವರನ್ನು 'ಶಬ್ದಬ್ರಹ್ಮ' ಎಂದು ಕರೆಯಬಹುದು. 'ನೇಗಿಲಯೋಗಿ' ಎಂಬ ಶಬ್ದವು ರೈತನನ್ನು ಸೂಚಿಸಲು ಸೃಷ್ಟಿಸಿಕೊಂಡಿರುವ ಹೊಸ ಶಬ್ದ. ಇದನ್ನು ಸೃಷ್ಟಿಸಿದವರು ಕುವೆಂಪು.ಆ ಹೆಸರಿನ ತಮ್ಮ ಕವನವೊಂದರಲ್ಲಿ ರೈತನನ್ನು ಹೀಗೆ ಕರೆದಿದ್ದಾರೆ.ನಿಸ್ವಾರ್ಥಿಯಾಗಿ ಹೊಲದಲ್ಲಿ ದುಡಿದು ಮಿಕ್ಕವರಿಗೆಲ್ಲ ಅನ್ನ ಬೆಳೆದು ಕೊಡುವ ರೈತನ ಕಾಯಕ ಕವಿಗೆ ಯೋಗದ ಹಾಗೆ ಕಾಣುತ್ತದೆ.

ಈ ಪದದಲ್ಲಿ ಎರಡು ಶಬ್ದಗಳು ಸೇರಿವೆ: ನೇಗಿಲು ಮತ್ತು ಯೋಗಿ. ಇವೆರಡೂ ಕೂಡಿ ಆದ ರೂಪವನ್ನು ಸಮಾಸ ಎನ್ನುತ್ತಾರೆ.ಇಲ್ಲಿ ಮೊದಲ ಪದ ಅಚ್ಚಗನ್ನಡದ್ದಾದರೆ, ಎರಡನೆಯದು ಸಂಸ್ಕೃತದ್ದು.ಇಂಥ ಶಬ್ದಸೃಷ್ಟಿಯನ್ನು ಹಿಂದಿನ ವ್ಯಾಕರಣಶಾಸ್ತ್ರಜ್ಞರು ತಪ್ಪು ಎನ್ನುತ್ತಿದ್ದರು.ಕನ್ನಡ ಶಬ್ದಕ್ಕೆ ಕನ್ನಡ ಪದ ಸೇರಬೇಕು, ಸಂಸ್ಕೃತದ್ದಾದರೆ ಸಂಸ್ಕೃತ ಪದವನ್ನು ಸೇರಿಸಿ ಸಮಾಸ ಮಾಡಬೇಕು ಎಂಬುದು ಅವರ ವಾದ.ಕನ್ನಡ–ಸಂಸ್ಕೃತ ಶಬ್ದಗಳು ಸೇರಿ ಆದುದು 'ಅರಿಸಮಾಸ'ವಂತೆ. ಕನ್ನಡ ಸಂಸ್ಕೃತಗಳು ಶತ್ರು(ಅರಿ)ಗಳು! ಆದರೆ ಶಬ್ದಬ್ರಹ್ಮರಾದ ಕವಿಗಳು, ತಮ್ಮ ಭಾವನೆಯನ್ನು ಸಮರ್ಪಕವಾಗಿ ಹೇಳಲು ತವಕಿಸುವ ಸಾಮಾನ್ಯ ಜನರು ಕೂಡ ಇಂಥ ಶಾಸ್ತ್ರಜ್ಞರ ಅಪ್ಪಣೆಯನ್ನೆಲ್ಲಿ ಪಾಲಿಸುತ್ತಾರೆ!ವ್ಯಾಕರಣ ನಿಯಮವನ್ನು ಮೀರುವುದರಿಂದಲೇ ಭಾಷೆಗೆ ಎಷ್ಟೋ ವೇಳೆ ಒಳ್ಳೆಯದಾಗುವುದು!

ಅಂದ ಹಾಗೆ, ಇನ್ನೊಂದು ಮಾತು.ರೈತನನ್ನು ಬೇಂದ್ರೆಯವರು 'ಭೂಮಿತಾಯಿಯ ಚೊಚ್ಚಲಮಗ'ಎಂದು ಕರೆಯುತ್ತಾರೆ. ಯಾಕಂದರೆ ಅವನು ತಾನೇ ಸದಾ ಭೂಮಿಯನ್ನು ಅವಲಂಬಿಸಿರುವುದು.ಆದರೂ ಅವನಿಗೆ ಕಡುಕಷ್ಟ ತಪ್ಪದಲ್ಲ ಎಂಬ ವಿಷಾದ ಬೇಂದ್ರೆಯವರ ಅದೇ ಹೆಸರಿನ ಕವಿತೆಯೊಂದರಲ್ಲಿ ಸೂಚಿತವಾಗಿದೆ.ಒಬ್ಬನನ್ನೇ ಕುರಿತು ಇಬ್ಬರು ಕವಿಗಳು ಬೇರೆ ಬೇರೆ ಶಬ್ದಗಳನ್ನು ರೂಪಿಸಿರುವುದರ ಹಿಂದೆ ಆಯಾ ಕವಿಗಳ ಮನೋಭಾವವವೇ ಅಡಕವಾಗಿದೆ.

*****

**ಪಂಚಮಹಾಪಾತಕ:** ಇದೊಂದು ಸಂಸ್ಕೃತ ಸಮಾಸಪದ, ಐದು ದೊಡ್ಡ ಪಾತಗಳನ್ನು ಹೇಳುತ್ತದೆ. ಅತಿಮಾನುಷವೆಂದು ನಂಬಲಾದ ಶಕ್ತಿಯನ್ನು ಕೆರಳಿಸುವ ಭಾವನೆಯನ್ನೋ ಕಾರ್ಯವನ್ನೋ ಸ್ಥೂಲವಾಗಿ ಪಾತಕ ಎಂದು ಹೇಳಬಹುದು.ಪಾತಕದ ಕಲ್ಪನೆ ವೇದಗಳಷ್ಟೇ ಹಳೆಯದು.ಮನುಷ್ಯ ಪಾತಕವನ್ನು ಮಾಡಲು ಕಾರಣ ವಿಧಿ, ಮಾದಕ ದ್ರವ್ಯಗಳು, ಕೋಪ, ದ್ಯೂತ, ಅಜಾಗರೂಕತೆ ಅಥವಾ ಸ್ವಪ್ನಸ್ಥಿತಿ ಎಂದು ಋಗ್ವೇದದಲ್ಲಿ ಹೇಳಿದೆ.ನಾನಾ ಬಗೆಯ ಪಾತಕಗಳಿದ್ದರೂ ಛಾಂದೋಗ್ಯ ಉಪನಿಷತ್ತಿನ ಕಾಲದ ಹೊತ್ತಿಗೆ ಅತ್ಯಂತ ದೊಡ್ಡ ಪಾತಕಗಳೆಂದು ಭಾವಿಸಲಾದ ಬ್ರಹ್ಮಹತ್ಯೆ, ಸುರಾಪಾನ, ಬ್ರಾಹ್ಮಣಸುವರ್ಣಾಪಹರಣ, ಗುರುತಲ್ಪಗಮನ ಮತ್ತು ಈ ನಾಲ್ಕು ಪಾತಕಗಳಲ್ಲಿ ಒಂದನ್ನಾದರೂ ಮಾಡಿದವನ ಸಹವಾಸ  ಇವುಗಳು 'ಪಂಚಮಹಾಪಾತಕ' ಎಂದು ಪರಿಗಣಿತವಾಗಿದ್ದವು.

ಮುಂದೆ 'ಪಂಚಮಹಾಪಾತಕ' ಎಂಬುದು ನುಡಿಗಟ್ಟಿನಂತಾಗಿ ವಿವಿಧ ಧರ್ಮಗಳವರು ವಿವಿಧ ಪಟ್ಟಿಗಳನ್ನು ಪರಿಗಣಿಸಿದರು.ಜೈನ ದೃಷ್ಟಿಕೋನದ ಗ್ರಂಥವಾದ 'ವಡ್ಡಾರಾಧನೆ'ಯಲ್ಲಿ "ಬಾಲವಧೆ ಸ್ತ್ರೀವಧೆ ಗೋವಧೆ ಬ್ರಾಹ್ಮಣವಧೆ ಋಷಿವಧೆಯೆಂದೀ ಪಂಚಮಹಾಪಾತಕಂಗಳಂ" ಎಂಬ ವಿವರ ಸಿಕ್ಕುತ್ತದೆ. ಬೌದ್ಧರಲ್ಲಿ ಪಂಚಾಂತರಾಯಗಳಾದ ಮಾತೃವಧೆ, ಪಿತೃವಧೆ, ಅರ್ಹತ್‌ವಧೆ, ಬೌದ್ಧನೊಬ್ಬನ ರಕ್ತಪಾತ ಮತ್ತು ಪುರೋಹಿತವರ್ಗದಲ್ಲಿ ಭೇದವುಂಟುಮಾಡುವುದನ್ನೇ ಪಂಚಪಾತಕಗಳೆಂದು ಪರಿಗಣಿಸಲಾಗುತ್ತಿತ್ತು.ವಚನಕಾರರು ವಿವಿಧ ರೀತಿಗಳಲ್ಲಿ 'ಪಂಚಮಹಾಪಾಕ'ಗಳನ್ನು ಅರ್ಥೈಸಿದರು. ಉದಾಹರಣೆಗೆ ಜೇಡರ ದಾಸಿಮಯ್ಯನು "ದರುಶನ ತಪ್ಪುಕ ಪ್ರಥಮ ಪಾತಕ, ಸ್ಪರ್ಶನ ತಪ್ಪುಕ ದ್ವಿತೀಯ ಪಾತಕ, ಗುರು ತಪ್ಪುಕ ತೃತೀಯ ಪಾತಕ, ಪರದಾರ ಚತುರ್ಥ ಪಾತಕ, ಮಾಂಸಾಹಾರ ಪಂಚಮ ಮಹಾಪಾತಕ" ಎಂದರೆ; ಚೆನ್ನಬಸವಣ್ಣನು "ಭವಿಪಾಕವೆಂಬುದು ಪ್ರಥಮ ಪಾತಕ, ಪ್ರತಿಮಾದಿಗಳಿಗೆರಗಿದಡೆ ಎರಡನೆಯ ಪಾತಕ, ಗುರುವಾಕ್ಯವ ಮೀರಿದಡೆ ಮೂರನೆಯ ಪಾತಕ, ಪರಧನಪರಸ್ತ್ರೀಗಳುಪಿದಡೆ ನಾಲ್ಕನೆಯ ಪಾತಕ, ಶಿವನಿಂದೆಯ ಕೇಳಿದಡೆ ಐದನೆಯ ಪಾತಕ" ಎನ್ನುತ್ತಾನೆ. ಮತ್ತೂ ಕೆಲವರ ವಿಭಿನ್ನ ಹೇಳಿಕೆಗಳಿವೆ. ಈಗಲೂ ಈ ನುಡಿಗಟ್ಟು ಬಳಕೆಯಲ್ಲಿದೆ

**ಕಿರು ವಿಮರ್ಶೆ : 'ಕೊಡು–ತೆಗೆದುಕೊ' ಲೇಖಕ: ಆಡಮ್‌ಗ್ರ್ಯಾಂಟ್, ೨೦೧೩.**

## "Give and Take" by Adam Grant

ಇತರರ ಜೊತೆಗಿನ ಸಂಬಂಧಗಳ ಬಗ್ಗೆ ಒಂದು ದೃಷ್ಟಿಕೋನ

ಸಾಮಾನ್ಯವಾಗಿ ಸಹಾಯ ಹಸ್ತ ನೀಡುವವರನ್ನು ಕೆಳ ದರ್ಜೆಯವರೆಂದು ಪರಿಗಣಿಸಿ ಅವರು ಇತರರಿಗೆ ಜ್ಞಾನ ಹಂಚುವಲ್ಲಿ ಹಾಗೂ ಕೌಶಲವನ್ನು ತಿಳಿಸಿಕೊಡುವಲ್ಲಿ ತಮ್ಮ ಸಮಯ ವ್ಯರ್ಥ ಮಾಡಿಕೊಂಡು ಯಶಸ್ಸು ಗಳಿಸುವುದಿಲ್ಲ ಆದರೆ ಇಂತಹ ಕೊಡುಗರಿಂದ ಜ್ಞಾನ ತೆಗೆದುಕೊಳ್ಳುವವರು ಯಶಸ್ಸಿನತ್ತ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿರುತ್ತಾರೆ ಹಾಗೂ ಅಗತ್ಯವಿದ್ದಾಗ ಮಾತ್ರ ಎಷ್ಟನ್ನು ಎಷ್ಟರ ಮಟ್ಟಿಗೆ ಯಾವಾಗ ಕಲಿಯಬೇಕು ಎಂಬುದನ್ನು ಅರಿತಿರುತ್ತಾರೆ ಎಂಬ ನಂಬಿಕೆಗಳು ಉದ್ಯೋಗ ಸ್ಥಳಗಳಲ್ಲಿ ಕಂಡು ಬರುತ್ತವೆ, ಕೊಡು – ತೆಗೆದುಕೊ ಎಂಬ ಪುಸ್ತಕವು ಸಾಂಪ್ರದಾಯಿಕ ನಂಬಿಕೆಗಳಂತೆ ಮಾನವನು ಸಂಘ ಜೀವಿಯಾಗಿರಲು ಎಲ್ಲರ ಜೊತೆ ಸಂಪರ್ಕ ಹೊಂದಿರುವುದು ಹಾಗೂ ಇತರರು ತಮ್ಮ ಗುರಿಯನ್ನು ಸಾಧಿಸಿಕೊಳ್ಳಲು ಸಹಾಯ ಮಾಡುವುದು ಇವುಗಳ ಬಗ್ಗೆ ಚಿಂತನೆ ಮಾಡಲು ಈ ಪುಸ್ತಕವು ಹೊಸ ದಿಕ್ಕನ್ನುತೋರಿಸುತ್ತದೆ. ಬಹಳಷ್ಟು ನೈಜ ಘಟನೆಗಳನ್ನು ಆಧರಿಸಿ ಬರೆದಿರುವ ಪುಸ್ತಕದಲ್ಲಿ, ಇತರರಿಗೆ ಸಹಾಯ ಮಾಡುವುದರಿಂದ ಹಾಗೂ ಯಾವುದೇ ವ್ಯಕ್ತಿ ಸಾಮಾನ್ಯವಾಗಿ ಬೆಂಬಲ ನೀಡುವ ಮಿತ್ರ ಹಾಗೂ ಸಹದ್ಯೋಗಿಆಗಿದ್ದಲ್ಲಿಅವರಿಗೆಅಪಾರ ಲಾಭವಿದೆ ಎಂಬುದನ್ನು ಸಾಬೀತುಪಡಿಸಲಾಗಿದೆ. ನಾವು ಇತರರೊಂದಿಗೆ ಅನ್ಯೋನ್ಯತೆ ಹೊಂದುವುದರಿಂದ ಯಶಸ್ಸು ಹಾಗೂ ಸಂತೋಷಕ್ಕೆ ಚಾಲನೆ ದೊರಕುತ್ತದೆ ಎಂಬುದನ್ನು ಮೂಲಭೂತವಾಗಿ ಬೇರೆಯದೇ ಆದ ನಿಟ್ಟಿನಿಂದ ಬಿಂಬಿಸಲಾಗಿದೆ.

ಈ ಪುಸ್ತಕದಲ್ಲಿ ಎಲ್ಲಾ ಜನರನ್ನು ಮೂರು ವರ್ಗಗಳಲ್ಲಿ ವಿಂಗಡಿಸಲಾಗಿದೆ – ಕೊಡುಗ, ತೆಗೆದುಕೊಳ್ಳುವವ ಹಾಗೂ ಸಮನಾಗಿ ಹೊಂದಿಸುವವ. ಎಲ್ಲವೂತಮಗೆ ಮಾತ್ರ ದೊರಕಬೇಕೆಂದು ತೆಗೆದುಕೊಳ್ಳುವವ ಹಾತೊರೆದರೆ ಸಮನಾಗಿ ಹೊಂದಾಣಿಕೆ ಮಾಡಿಕೊಳ್ಳುವವ ತಾನು ಮಾಡಿದ ಸಹಾಯಕ್ಕೆ ಪ್ರತಿಫಲ ಏನು ಲಭಿಸುತ್ತದೆಎಂದು ತಾಳೆ ಹಾಕಿ ನೋಡುತ್ತಾರೆ. ಇತರರ ಅಗತ್ಯಗಳನ್ನು ಪೂರೈಸಲುತನ್ನ ಸಮಯವನ್ನು ವ್ಯರ್ಥಮಾಡಿಕೊಳ್ಳುತ್ತಾರೆ ಎಂದು ಕೊಡುಗರನ್ನು ಪರಿಗಣಿಸಲಾಗುತ್ತದೆ. ತೆಗೆದುಕೊಳ್ಳುವವ ಉನ್ನತ ಸ್ಥಾನಗಳನ್ನು ತಲುಪಿದರೆ ಕೊಡುಗರಿಗೆ ಸ್ಥಾನಮಾನ ದೊರಕದೇ ಕೆಳಗಿಳಿಯುತ್ತಾರೆ ಎಂದು ಬಹಳಷ್ಟು ಜನ ನಂಬುತ್ತಾರೆ.

ಆದರೆ ಇದು ನಿಜವೇ?

ಇತರರ ಬಗ್ಗೆ ಕಾಳಜಿ ವಹಿಸಿದವರು ಸ್ವಂತ ಹಿತಾಸಕ್ತಿಗಳನ್ನು ಬದಿಗೊತ್ತಿ ಕೊಡುಗರಾಗುತ್ತಾರೆ. ಹಾಗೆಯೇ ತಮ್ಮ ಸ್ವಹಿತಾಸಕ್ತಿಯನ್ನು ಜೊತೆಯಲ್ಲಿಯೇ ಗಮನದಲ್ಲಿಟ್ಟುಕೊಂಡವರು ಯಶಸ್ಸು ಗಳಿಸುತ್ತಾರೆ ಎಂಬ ವಾದವನ್ನು ಲೇಖಕರು ಸಾಬೀತುಪಡಿಸುತ್ತಾರೆ.

ಮಾನವ ಸಂಪನ್ಮೂಲ ನಿರ್ವಹಣೆ ಆಸಕ್ತರಿಗೆ ಕುತೂಹಲ ಮೂಡಿಸುವ ಪುಸ್ತಕ.

– ಬಿ. ಆರ್.ರವೀಂದ್ರನಾಥ

## ಎಂವಿಸೀ – ಬದುಕು – ಒಂದು ನೋಟ–೨

**––ಡಾ. ಪಿ.ವಿ. ನಾರಾಯಣ**

ಇವರಿದ್ದ ಮನೆಯ ಬಳಿಯೇ ಅರಮನೆಯ ಆನೆ ಕರೋಟಿಯಿತ್ತು. ಚಿಕ್ಕಂದಿನಿಂದಲೂ ಇವರಿಗೆ ಚಿತ್ರಕಲೆಯ ಗೀಳು. ಅಳಸಿಂಗರಾಚಾರ್ಯರ ರಾಮಾಯಣದಲ್ಲಿನ ಹನುಮಂತನ ಚಿತ್ರಗಳು ಹಾಗೂ ಆನೆ ಕರೋಟಿಯಲ್ಲಿದ್ದ ಆನೆಗಳನ್ನು ನೋಡಿ ಹನುಮಂತ ಮತ್ತು ಆನೆಗಳ ಚಿತ್ರಗಳನ್ನು ಬಿಡಿಸುತ್ತಿದ್ದರಂತೆ.ಪ್ರತಿ ಶನಿವಾರ ಮನೆಯಲ್ಲಿ ನಡೆಯುತ್ತಿದ್ದ ಭಜನೆ ಕಾರ್ಯಕ್ರಮಗಳಲ್ಲಿ ಹಿರಿಯರೊಬ್ಬರು ದಾಸರ ಪದಗಳನ್ನು ಸೊಗಸಾಗಿ ಹಾಡುತ್ತಿದ್ದುದರಿಂದ ಸಂಗೀತಜ್ಞಾನವೂ ಬಾಲಕ ಸೀತಾರಾಮಯ್ಯನಿಗೆ ಸಿಕ್ಕಿತು.ಪರಿಚಯದವರೊಬ್ಬರು ಚೆನ್ನಾಗಿ ಮೃದಂಗ ನುಡಿಸುತ್ತಿದ್ದು, ಇವರ ತಂದೆ ಅವರಿಂದ ಮೃದಂಗ ವಾದನ ಕಲಿಯಲು ಏರ್ಪಾಟು ಮಾಡಿದರಂತೆ. ಇದೆಲ್ಲ ಸೇರಿ ಬಾಲಕ ಸೀತಾರಾಮಯ್ಯನಲ್ಲಿ ಹುದುಗಿದ್ದ ಸಾಹಿತ್ಯ–ಸಂಗೀತಾಸಕ್ತಿಗಳು ಕುದುರಿದವು.

ಮೈಸೂರು ವಿದ್ಯೆ–ಕಲೆಗಳ ನೆಲೆವೀಡು.ಅಂತಹ ಊರಿನಲ್ಲಿಯೇ ಸೀತಾರಾಮಯ್ಯನವರ ಶಿಕ್ಷಣವೆಲ್ಲ ನಡೆಯಿತು.ತಮ್ಮ ಐದನೆಯ ವರ್ಷಕ್ಕೆ ಇವರು ಮನೆಯ ಎದುರಿಗೇ ಇದ್ದ ಶಾಲೆ ಸೇರಿದರು. ಆದರೆ ಅಲ್ಲಿದ್ದುದು ಮೊದಲೆರಡು ತರಗತಿಗಳು ಮಾತ್ರ; ಹೀಗಾಗಿ ಮೂರನೆಯ ತರಗತಿಗೆ ಅವರು ಮನೆಗೆ ಸ್ವಲ್ಪ ದೂರದ ಚಾವಡಿ ಬೀದಿಯಲ್ಲಿದ್ದ ಶಾಲೆ ಸೇರಬೇಕಾಯಿತು.ಅಷ್ಟು ಹೊತ್ತಿಗೆ ಮನೆಯ ಹತ್ತಿರವೇ ಕೃಷ್ಣರಾಜ ಪ್ರೈಮರಿ ಶಾಲೆ ಆರಂಭಗೊಂಡು ಇವರು ಅಲ್ಲಿ ಓದು ಮುಂದುವರಿಸಿದರು.ಇವರು ಮಾಧ್ಯಮಿಕ ಶಾಲೆಯ ತರಗತಿಗಳಲ್ಲಿ ಓದುತ್ತಿದ್ದಾಗ ಸಮೀಪದ ಬಂಧುವೊಬ್ಬ ಟೀಚರ್ಸ್ ಟ್ರೈನಿಂಗ್ ಪರೀಕ್ಷೆಗಾಗಿ ಇವರ ಮನೆಯಲ್ಲೇ ಓದಿಕೊಂಡಿದ್ದ.ಅವನು ಗಳಗನಾಥ, ವೆಂಕಟಾಚಾರ್ಯ ಮುಂತಾದವರ ಕಾದಂಬರಿಗಳನ್ನು ಮನೆಗೆ ತರುತ್ತಿದ್ದುದರಿಂದ ಬಾಲಕ ಸೀತಾರಾಮಯ್ಯ ಆಗಿನ ಕಾಲದ ಹೊಚ್ಚ ಹೊಸ ಕನ್ನಡ ಪುಸ್ತಕಗಳನ್ನು ಓದುವ ಅನುಕೂಲ ಪಡೆದರು.ಆನಂತರ ಡಿ. ಬನುಮಯ್ಯ ಕೊಲಿಜಿಯೇಟ್ ಹೈಸ್ಕೂಲ್ ಅನ್ನು ಸೇರಿ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದರು.ಆಗ ಇವರ ಅಧ್ಯಾಪಕರಾಗಿದ್ದ ಕಾನಕಾನಹಳ್ಳಿ ವರದಾಚಾರ್, ಮನೆಯಲ್ಲಿ ಭಾರತವಾಚನ ಮಾಡುತ್ತಿದ್ದ ಕಳಲೆ ಕೃಷ್ಣರಾಯರು ಇವರುಗಳ ಸುಶ್ರಾವ್ಯ ಕಾವ್ಯವಾಚನದ ಧಾಟಿಯಿಂದ ಪ್ರಭಾವಿತರಾಗಿ ಪದ್ಯಗಳ ಲಯ, ಛಂದಸ್ಸುಗಳ ಬಗ್ಗೆ ಒಲವು ಮೂಡಿಸಿಕೊಂಡರು.ತಮ್ಮ ಶಾಲಾ ದಿನಗಳಲ್ಲಿಯೇ ಚಾರ್ಲ್ಸ್ ಕಿಂಗ್ಸ್‌ಲಿ, ಡ್ಯಾನಿಯಲ್ ಡೀಫೋ, ಸರ್ ವಾಲ್ಟರ್ ಸ್ಕಾಟ್, ಥಾಮಸ್ ಹಾರ್ಡಿ, ಚಾರ್ಲ್ಸ್ ಡಿಕನ್ಸ್ ಮುಂತಾದವರ ಇಂಗ್ಲಿಷ್ ಕಾದಂಬರಿಗಳನ್ನೂ ಅವರು ಓದಿ ಮುಗಿಸಿದ್ದರು.

**(ಮುಂದುವರೆಯುತ್ತದೆ)**

# ಎಂ.ಕೆ. ಇಂದಿರಾ ಅವರ 'ಸದಾನಂದ' – ಒಂದು ಅವಲೋಕನ – 2

ಕಡೆ ಕಡೆಗೆ, ತನಗೆ ಮೊದಲಿನಿಂದಲೂ ಸಂಬಂಧ, ನಂಟು ಇಲ್ಲದೇ ಇರುವ ಕುಟುಂಬದೊಂದಿಗೆ, ತನ್ನ ಪ್ರಗತಿಪರ ನಿಲುವುಗಳಿಂದ, ತಾತ್ವಿಕ ನಂಬಿಕೆಗಳಿಂದ, ಸಮಾಜೋದ್ಧಾರದ ತನ್ನ ತುಡಿತಗಳಿಂದ, ಕಥಾನಾಯಕಿ, ವಿಧವೆಯಾದ ಕಮಲೆಯ ವಿವಾಹದೊಂದಿಗೆ ಬೆಸೆದುಕೊಳ್ಳುತ್ತದೆ. ಉತ್ತರಾರ್ಧದ ಕಥಾಭಾಗಕ್ಕೂ ಪೂರ್ವಾರ್ಧದಲ್ಲಿ ನಿರೂಪಣೆಯಾದ ಕಥಾ ವಿವರಗಳಿಗೂ ಯಾವುದೇ ರೀತಿಯ ಅಂತರ್ಸಂಬಂಧ ಇಲ್ಲವೇ ಇಲ್ಲ. ಯಾರೂ ಊಹಿಸದ ಘಟನಾವಳಿಗಳು ನಡೆದು ಹೋಗುತ್ತವೆ. ಮೊದಲರ್ಧದ ಕತೆಯಲ್ಲಿ ಸಹಜವಾದ ರೀತಿಯಲ್ಲಿ ಮಲೆನಾಡಿನ ಚಿತ್ರಗಳು, ಪಾತ್ರಗಳಾಡುವ, ದಕ್ಷಿಣಕನ್ನಡ, ಉತ್ತರಕನ್ನಡ, ಮಲೆನಾಡಿನ ಭಿನ್ನಭಿನ್ನ ಭಾಷಾ ಪ್ರದೇಶಗಳ ಮತ್ತು ಪುಣೆಯ ಕಡೆಯ ಭಾಷೆಯ ವೈಶಿಷ್ಟ್ಯಗಳುಳ್ಳ ಭಾಷಾ ಪ್ರಯೋಗಗಳು– ಅಲ್ಲದೆ ಅಲ್ಲಲ್ಲಿನ ಪರಿಸರಕ್ಕೆ ಅನುಗುಣವಾಗಿ ವರ್ತಿಸುವ ಪಾತ್ರಗಳು. ಊಟೋಪಚಾರಗಳು–ಇವೆಲ್ಲವೂ ಅತ್ಯಂತ ಸಹಜವಾಗಿ ಮೂಡಿ ಬಂದಿವೆ.

ಮೊದಲ ಈ ಭಾಗದಲ್ಲಿ ಕಾಫಿ ಪ್ಲಾಂಟರ್ ಆದ ರಾಮಣ್ಣ ಮತ್ತು ಆತನ ಸೋದರಿಯಾದ ಪುಟ್ಟಮ್ಮನ ಕುಟುಂಬಗಳ ನಡುವಿನ ಮಧುರಬಾಂಧವ್ಯ, ಆ ಕುಟುಂಗಳ ಮಕ್ಕಳ ನಡುವಿನ ಸೌಹಾರ್ದಯುತ ಒಡನಾಟಗಳು, ನಂತರ ಕಾರಣಾಂತರ ಸಂಭವಿಸುವ ತಿರುವುಗಳು, ಸನ್ನಿವೇಶಗಳು, ಪರಿಣಾಮವಾಗಿ ಎರಡೂ ಕುಟುಂಬಗಳು ಅನುಭವಿಸುವ ನೋವು, ನಲಿವುಗಳ ಚಿತ್ರಣವೇ ಢಾಳಾಗಿ ಕಾಣುತ್ತದೆ. ಚಿಕ್ಕಮಗಳೂರು– ದುಂಡುಮಲ್ಲಿಗೆಗಳ ನಡುವೆ ಸೇತುವೆಯಾಗಿ, ನೂ ಕೋ ನರಸಿಂಹ ಬಸ್ಸು ಎರಡೂ ಕುಟುಂಬಗಳ 'ಬರಹೋಗುವ' ಕ್ರಿಯೆಯಲ್ಲಿ ಮಹತ್ವದ ಪಾತ್ರವಹಿಸುತ್ತದೆ.

ರಾಮಣ್ಣನ ಮಕ್ಕಳ ಬದುಕಿನಲ್ಲಿ ಆಗುವ ಬದಲಾವಣೆಗಳು ಅನಿವಾರ್ಯವಾಗಿ, ದುಂಡು ಮಲ್ಲಿಗೆಯ ಮಕ್ಕಳ ಬದುಕಿನಲ್ಲಿಯೂ ಬದಲಾವಣೆಗಳನ್ನು ಉಂಟುಮಾಡುವುದೇ ಅಲ್ಲದೆ ಅವರ ಭವಿಷ್ಯದ ಮೇಲೂ ಪ್ರಭಾವ ಬೀರುತ್ತದೆ.ರಾಮಣ್ಣನ ಮಕ್ಕಳಲ್ಲಿ ಹಿರಿಯನಾದ ಮೂರ್ತಿ, ಶಿಸ್ತುಗಾರ, ಸೊಗಸುಗಾರ ಮತ್ತು ಸ್ವಾರ್ಥಿ ಅವನದು ಸ್ವಕೇಂದ್ರಿತ ಆಸಕ್ತಿ. ತನ್ನನ್ನೂ ತನ್ನ ಮಟ್ಟಿಗೆ ಮಾತ್ರ ಸೀಮಿತಗೊಳಿಸಿಕೊಳ್ಳುತ್ತಾನೆ. ಹಾಗೆಂದು ಬೇರೆಯವರಿಗೆ ಹಾನಿಮಾಡಬೇಕೆಂಬ ದುರುದ್ದೇಶವಂತೂ ಅವನಲ್ಲಿ ಇಲ್ಲ. ಎಲ್ಲರಂತೆ ಎಲ್ಲರೊಂದಿಗೆ ಬೆರೆಯುತ್ತಾನೆ. ಓರಗೆಯವರೊಂದಿಗೆ ಆಟವಾಡುತ್ತಾನೆ. ದುಂಡುಮಲ್ಲಿಗೆಯನ್ನು ಅಲ್ಲಿರುವವರನ್ನೂ ಪ್ರೀತಿಸುತ್ತಾನೆ. ಆದರೆ ತನ್ನ ಭವಿಷ್ಯದ ಕಾಳಜಿಯಷ್ಟೇ ಅವನಿಗೆ ಮುಖ್ಯವೆನಿಸುತ್ತದೆ. ಉಳಿದವರ ವಿಚಾರದಲ್ಲಿ ತಲೆಕೆಡಿಸಿಕೊಳ್ಳಬೇಕೆಂಬ ಉದ್ದೇಶವಾಗಲೀ, ತಲೆಕೆಡಿಸಿಕೊಳ್ಳುವುದಾಗಲಿ ಅವನಿಗೆ ಸಾಧ್ಯವಿಲ್ಲ.

ಬೆಂಗಳೂರಿಗೆ ಓದಲು ಬಂದವನು.ತನ್ನ ಸಹಪಾಠಿ ಮುಕ್ತಾಳನ್ನು ಪ್ರೀತಿಸಿ ಮದುವೆಯಾಗುತ್ತಾನೆ. ಅಲ್ಲಿಯವರೆಗೆ, ತನ್ನನ್ನೇ ಮದುವೆಯಾಗ ಬೇಕೆಂದಿದ್ದ ಗೌರಿಯ ನೆನಪಾಗಲೀ, ತನ್ನ ಹಿರಿಯರು. ಸೋದರಿಕೆಯ ಸಂಬಂಧದ ಬಗ್ಗೆ ಕಟ್ಟಿಕೊಂಡಿದ್ದ ಕನಸುಗಳಾಗಲೀ, ಇರಿಸಿಕೊಂಡಿದ್ದ ನಂಬಿಕೆಗಳಾಗಲೀ ಅವನಿಗೆ ಮುಖ್ಯವೆನಿಸುವುದಿಲ್ಲ. ಯಾರ ಯಾರ ಮನಸ್ಸಿನ ಮೇಲೆ ಎಂಥೆಂಥಾ ಆಘಾತಗಳಾಗ ಬಹುದೆಂಬ ಕಲ್ಪನೆಯಾಗಲೀ ಅವನಿಗಿರುವುದಿಲ್ಲ. ಆದರೂ ಸಂಪ್ರದಾಯಸ್ಥ, ಮಡಿವಂತಿಕೆಯ ಮತ್ತು ಸಮಾಜಿಕ ನೀತಿ ನಿಯಮಗಳಿಗೆ ಬದ್ಧರಾಗಿ ಬದುಕುವವರಾಗಿದ್ದರೂ ತಮ್ಮ ನೋವು, ಸಂಕಟ, ನಿರಾಶೆಗಳನ್ನು ಬದಿಗಿರಿಸಿ, ಮೂರ್ತಿಯ ಸಂತೋಷಕ್ಕಾಗಿ ಪರಿಸ್ಥಿತಿಯೊಂದಿಗೆ ರಾಜಿ ಮಾಡಿ ಸಂಬಂಧ ಬೆಳೆದು ಗಟ್ಟಿಗೊಂಡಂತೆ, ಮೂರ್ತಿಯ ಮಾವನ ಮನೆಯವರೊಂದಿಗೆ ಸಹಜವಾಗಿ ನಡೆದುಕೊಳ್ಳುತ್ತಾರೆ. ಅವರ ಸ್ನೇಹ ಸೌಜನ್ಯ, ಔದಾರ್ಯ, ಪ್ರಗತಿಪರ ಆಲೋಚನೆಗಳಿಗೆ ಸಾನುಕೂಲವಾಗಿ ಸ್ಪಂದಿಸುತ್ತಾರೆ. ಮೂರ್ತಿಯ ಕುಟುಂಬದಲ್ಲಿ ನಡೆದ ದುರಂತಗಳಿಗೆ ಮರುಗುವುದಷ್ಟೇ ಅಲ್ಲ, ಬಸ್ ಅಪಘಾತದಲ್ಲಿ ಕಾಲಿಗೆ ಪೆಟ್ಟುಬಿದ್ದು ಅಂಗವಿಕಲೆಯಾದ ಗೌರಿಯ ಬಗ್ಗೆ ಮರುಕ ತೋರುತ್ತಾರೆ.ದೇಶಮುಖಿ ಅಂದರೆ ಮೂರ್ತಿಯ ಭಾವಮೈದುನ, ಮಧುಕರ, ಮೂರ್ತಿಯಿಂದ ವಂಚಿತಳಾದ ಗೌರಿಯನ್ನು ಮದುವೆಯಾಗಲು ಸಿದ್ಧನಾದ ಸಮಯದಲ್ಲೇ ಅಪಘಾತವಾಗಿ ಕಾಲು ಕಳೆದುಕೊಂಡಿದ್ದರಿಂದ ಮದುವೆ ಮುರಿದು ಬೀಳುತ್ತದೆ. ಇಂತಹ ಸಂದರ್ಭದಲ್ಲಿ ಮೂರ್ತಿಯ ಮನಸ್ಸಿನಲ್ಲಿ ಪಾಪಪ್ರಜ್ಞೆ, ವಿಷಾದಗಳು ಉಂಟಾದರೂ, ಅವನು ಏನನ್ನೂ ಮಾಡಲಾಗದ ಅಸಹಾಯಕನಾಗುತ್ತಾನೆ.

**(ಮುಂದುವರೆಯುತ್ತದೆ)**

## ಎಂ.ಕೆ. ಇಂದಿರಾ ಅವರ 'ಸದಾನಂದ' – ಒಂದು ಅವಲೋಕನ ಮುಂದುವರೆದ ಭಾಗ

ಮೂರ್ತಿಯತಮ್ಮರಾಜು, ಅವನಷ್ಟು ಬುದ್ಧಿವಂತನಲ್ಲ, ಆದರೆ ಅವನೆದೆ ತುಂಬ ಮಾನವೀಯತೆ, ಸೇವಾಪರತೆಗಳು ಕರುಣೆ, ದಯೆ ಇತ್ಯಾದಿಗಳು ಯಥೇಚ್ಛವಾಗಿದೆ. ಹದಿನೈದನೇ ವಯಸ್ಸಿಗೇ ಮದುವೆಯಾಗಿ, ಒಂದೆರಡು ದಿನಗಳು ಕಳೆಯುವಷ್ಟರಲ್ಲಿಯೇ, ವೈಧವ್ಯದ ಭೀಷಣಆಘಾತಕ್ಕೆ ಒಳಗಾದ ಅಕ್ಕ ಕಮಲೆಯ ಬಗ್ಗೆ, ಅಣ್ಣನಿಂದ ಮೋಸಹೋಗಿ, ದುರಾದೃಷ್ಟದಿಂದ ಅಂಗವಿಕಲೆಯಾಗಿ ಜೀವನದುದ್ದಕ್ಕೂ ಅವಿವಾಹಿತಳಾಗಿಯೇ ಉಳಿದು, ಸುದೀರ್ಘವಾದ ಬದುಕನ್ನು ನೋವು ಯಾತನೆಗಳಲ್ಲಿಯೇ ಕಳೆಯಬೇಕಾದ ಪರಿಸ್ಥಿತಿಯನ್ನು ಎದುರಿಸುತ್ತಿರುವ ಗೌರಿಯ ಬಗ್ಗೆ ಅಪಾರ ಕಳ ಕಳಿಯಿದೆ. ಲೇಖಕಿಯಂತೂ ರಾಜುವಿನ ಪಾತ್ರವನ್ನು ತೀರಾ ತೀರಾ ಆದರ್ಶನ ಪ್ರತೀಕವೆಂಬಂತೆ ಚಿತ್ರಿಸಿದ್ದಾರೆ. ಅವನಲ್ಲಿ ವಿವೇಕಾನಂದ, ಬುದ್ಧರನ್ನು ಗುರುತಿಸುವಂತೆ ಕಾಣಿಸಿದ್ದಾರೆ. ಅವನ ಒಳ್ಳೆತನ ಯಾವ ಮಟ್ಟದಲ್ಲಿ ಇದೆಯೆಂದರೆ, ಗೌರಿಯದೈನ್ಯ ಸ್ಥಿತಿಯನ್ನು ನೋಡಿಕರಗಿದ ಅವನಿಗೆ, ಏನಾದರಾಗಲೀ, ಕುಂಟಿಯನ್ನು ಮದುವೆಯಾಗಲು ಯಾರೂ ಬಾರದಿದ್ದಲ್ಲಿ, ಅವಳಿಗೆ ಭವಿಷ್ಯವೇ ಇಲ್ಲದಂತಾಗುವುದನ್ನು ತಪ್ಪಿಸಿ, ತಾನು ಮದುವೆಯಾಗಬೇಕಿರುವ ಜಾನಕಿಯನ್ನು ಹೇಗಾದರೂ, ಯಾವುದಾದರೂ ಸಬೂಬುಗಳಿಂದ ತಪ್ಪಿಹೋಗುವ ಹಾಗೆ ಮಾಡಿ, ನಂತರಗೌರಿಯನ್ನು ಮದುವೆಯಾಗಿ, ಅಣ್ಣನು ಮಾಡಿದತಪ್ಪಿಗೆ ಪ್ರಾಯಶ್ಚಿತ್ತವಾಗುವಂತಾಗಲಿ ಎಂದು ಬಯಸಿ, ಒಂದು ಯೋಜನೆಯನ್ನೂ ರೂಪಿಸುತ್ತಾನೆ. ಮೂರ್ಛೆರೋಗದ ನಾಟಕವಾಡಿ ಎಲ್ಲರನ್ನೂ ಗಾಬರಿಗೊಳಿಸಿ, ಜಾನಕಿ, ಬೇರೆಕಡೆ ಮದುವೆಯಾಗುವಂತೆ ಮಾಡಿ, ನಂತರತನ್ನ ನಾಟಕದ ಹಿಂದಿನ ಸತ್ಯವನ್ನುಎಲ್ಲರಿಗೂ ತಿಳಿಸುತ್ತಾನೆ.

ಇನ್ನು ಕಮಲೆಯ ಬದುಕಿಗೊಂದು ದಾರಿಯಾಗಬೇಕು. ಅದಕ್ಕೆ ಸದಾನಂದರ ಪರಿಚಯದವರೆಗೂ ಕಾಯಬೇಕಾಗುತ್ತದೆ. ಕಾಫಿಬೋರ್ಡ್ ಮೀಟಿಂಗಿಗೆಂದು ಬಂದಿದ್ದ ಸದಾನಂದ ಮತ್ತು ರಾಮಣ್ಣರ ಭೇಟಿ ಹಳೆಯ ಸ್ನೇಹಿತ ಎಳೆಗಳನ್ನು ಬೆಸೆಯುತ್ತದೆ. ಬಲವಂತದಿಂದ ರಾಮಣ್ಣನ ಮನೆಗೆ ಬಂದುಆತಿಥ್ಯ ಸ್ವೀಕರಿಸಿದ ಕ್ಷಣಗಳಲ್ಲಿ ರಾಮಣ್ಣನವರ, ತನ್ನತಂದೆಯೊಂದಿಗಿನ ಹಳೆಯ ಸ್ನೇಹದ ನೆನಪುಗಳು ಮರುಕಳಿಸುತ್ತವೆ. ರಾಮಣ್ಣನಕುಟುಂಬದ ವಿವರಗಳು ಸೂಕ್ಷ್ಮವಾಗಿ ತಿಳಿದು ಬರುತ್ತದೆ.ಅದೇ ಸಮಯದಲ್ಲಿ, ರಾಜು, ಕಮಲ, ಜಾನಕಿ ಇವರ ಕಣ್ಣಿಗೆ ಸದಾನಂದನ ಕೆಂಪುತುಟಿ, ಹೊಳಪಿನ ಕಣ್ಣುಗಳು, ಅವನ ಮೈಬಣ್ಣಚಿನ್ನದ ವಾಚು, ಹರಳಿನುಂಗರ, ಹಾಲು ನೊರೆಯಂತಹ ಫಿನ್ಲೆ ಪಂಚೆ, ನವಿರು ಮಲ್ಲಿನ ನೆಹರೂ ಬನಿಯನ್ಎಲ್ಲವೂಎಲ್ಲರನ್ನೂಕಮಲೆಯನ್ನೂಆಕರ್ಷಿಸುತ್ತವೆ. ಅವನ ಎತ್ತರ ಗಾತ್ರಗಳಿಂದ ಕೂಡಿದ ಭವ್ಯ ನಿಲುವು ಒಂದುಕ್ಷಣ ಮಂತ್ರಮುಗ್ಧಗೊಳಿಸುತ್ತವೆ. ಪುರುಷೋತ್ತಮನಂತೆಎಂದು ಭಾವಿಸುವಂತಾಗುತ್ತದೆ. ಆದರೂ ವಿಧವೆ ಹೆಣ್ಣು ಪರಪುರುಷನ ಬಗ್ಗೆ ಯೋಚಿಸುವುದೂ ಮಾತಾಡುವುದೂ ಪಾಪವೆಂಬ ಪ್ರಜ್ಞೆ ಅವಳನ್ನು ಎಚ್ಚರಿಸುತ್ತದೆ. ಇಂಥ ಭವ್ಯ ವ್ಯಕ್ತಿ ಮನೆಮಂದಿಯನ್ನೆಲ್ಲ ಸೆಳೆದುಕೊಳ್ಳುತ್ತಾನೆ. ಅದರಲ್ಲಿಯೂರಾಜು ಪೂರ್ತಿಯಾಗಿ ಸದಾನಂದನ ಬಗ್ಗೆ ಪರವಶಿಯಾಗುತ್ತಾನೆ. ಸದಾನಂದನನ್ನು ಒಮ್ಮೆ ನೋಡಿದ್ದೇ ಕಮಲೆ ಚಿತ್ತ ಸ್ತಿಮಿತತೆ ಕಳೆದುಕೊಳ್ಳುತ್ತಾಳೆ. ಥಟ್ಟನೆ ರಮಾನಂದ ಕಾದಂಬರಿಕಾರನ ನೆನಪು, ಅವನ ಪ್ರಗತಿಪರ ವಿಚಾರಗಳು ನೆನಪಾಗುತ್ತವೆ. **(ಮುಗಿಯಿತು)**


**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2018-2020**
**dt. 27-10-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 30-06-2018**


## ಜೂನ್ 2018 ತಿಂಗಳಿನ ಹಸ್ತಪ್ರತಿ ವಿಭಾಗದ ಮತ್ತು ಗ್ರಂಥಾಲಯದ ವರದಿ

ಶ್ರೀ ತಮ್ಮಣ್ಣ ಅಡಿಗ ಮತ್ತು ಶ್ರೀಮತಿ ವಾರಿಜಾ ಅಡಿಗಇವರು ನಮ್ಮ ಹಸ್ತಪ್ರತಿ ಭಂಡಾರಕ್ಕೆ 19 ತಿಗಳಾರಿ ಲಿಪಿಯ ಗ್ರಂಥಗಳನ್ನು ದಾನವಾಗಿ ಏಪ್ರಿಲ್ 2018ರಲ್ಲಿ ನೀಡಿದ್ದಾರೆ.ಈ ಗ್ರಂಥಗಳನ್ನು ಕೃತಜ್ಞತಾ ಪೂರ್ವಕವಾಗಿ ಸ್ವೀಕರಿಸಿ, ಅವುಗಳ ಸಂರಕ್ಷಣಾ ಕಾರ್ಯವೂ ಸಂಪೂರ್ಣಗೊಂಡಿದೆ.

ಬೆಂಗಳೂರು ವಿಶ್ವವಿದ್ಯಾಲಯದ ಹಸ್ತಪ್ರತಿ ವಿಭಾಗವು ಶ್ರೀಮತಿ ನಾಗಮ್ಮ ಎಂಬುವರನ್ನು ನಮ್ಮ ಪ್ರತಿಷ್ಠಾನದಲ್ಲಿ ಹಸ್ತಪ್ರತಿ ಸಂರಕ್ಷಣಾ ವಿಧಾನಗಳನ್ನು ಕಲಿಯುವ ಸಲುವಾಗಿ ತರಬೇತಿಗಾಗಿ ನಿಯೋಜಿಸಿದ್ದು, ಅವರು 6ನೇ ಮೇ 2018ರಿಂದ ಹಸ್ತಪ್ರತಿ ವಿಭಾಗದಲ್ಲಿ ತರಬೇತಿ ಪಡೆ-ಯುತ್ತಿದ್ದಾರೆ.ಗ್ರಂಥಾಲಯದಲ್ಲಿ ವಿದ್ವತ್ ನಿಯತ ಕಾಲಿಕೆಗಳ ಪೂರ್ಣ ಪರಿಶೀಲನೆ ನಡೆಯುತ್ತಿದ್ದು, ಅವುಗಳನ್ನು ಸಂಪುಟ/ಸಂಚಿಕೆವಾರು ಜೋಡಿಸಿಡುವ ಕಾರ್ಯ ಸಾಗುತ್ತಿದೆ.

### ಪ್ರತಿಷ್ಠಾನದ ಗ್ರಂಥಾಲಯ

ಪ್ರತಿಷ್ಠಾನದ ಗ್ರಂಥಾಲಯದಲ್ಲಿದ್ದ ಎಲ್ಲಾ ಗ್ರಂಥಗಳನ್ನು ಪರಿಶೀಲಿಸಿ ಅನಗತ್ಯ ಪುಸ್ತಕಗಳನ್ನು ವಿಲೇವಾರಿ ಮಾಡಿ ಉತ್ತಮ ಹಾಗೂ ಅಲಭ್ಯ ಗ್ರಂಥಗಳನ್ನು ಪುನರ್‌ಜೋಡಿಸಲಾಗಿದೆ. ನಮ್ಮ ಗ್ರಂಥಾಲಯವು ಸಂಶೋಧಕರಿಗೆ ಹಾಗೂ ಕನ್ನಡ ವಿದ್ಯಾರ್ಥಿಗಳಿಗೆ ಉಪಯುಕ್ತವಾಗ ಬೇಕು ಎಂಬ ಉದ್ದೇಶದಿಂದ ಬಹಳಷ್ಟು ಶ್ರಮ ವಹಿಸಲಾಗಿದೆ. ನಮ್ಮ ಗ್ರಂಥಾಲಯದ ಬಳಕೆ ಮಾಡಿಕೊಳ್ಳಲು ಎಲ್ಲಾ ಕನ್ನಡಾಭಿಮಾನಿಗಳನ್ನು ಕೋರುತ್ತೇವೆ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ......................................................................................

........................................................................................................

........................................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭